ಕನ್ನಡ ಕವಿ ಕಾವ್ಯಮಾಲೆ
ರಜತಮಹೋತ್ಸವದ ಪ್ರಕಟಣೆ

ಸತ್ಯಾಯನ

# ಹರಿಶ್ಚಂದ್ರ

(ಯಕ್ಷರೂಪಕ)

ಪು. ತಿ. ನರಸಿಂಹಾಚಾರ್

ಶಾ ರ ದಾ ಮಂ ದಿ ರ
ರಾಮಯ್ಯರ್ ರಸ್ತೆ, ಮೈಸೂರು–4

ಈ ಮಾಲೆಯ ಸಂಪಾದಕರು

*H. M. SHANKAR NARAYAN RAO, M.A.*
*Professor and Head of the Department of Kannada (Rtd.)*
*Principal (Rtd.) Sarada Vilas College, Mysore—4*

ಪ್ರಕಾಶಕರು

H. S. GOPINATH. B.E. M.B.A.

ಮೊದಲನೆಯ ಮುದ್ರಣ : ೧೯೬೮ (ಜೂನ್)
ಎರಡನೆಯ ಮುದ್ರಣ : ೧೯೭೦ (ಜೂನ್)
ಮೂರನೆಯ ಮುದ್ರಣ : ೧೯೭೪ (ಜೂನ್)



ಬೆಲೆ :

ಸಾದಾ ಪ್ರತಿ ರೂ. 3-25
ಕ್ಯಾಲಿಕೊ ಪ್ರತಿ ರೂ. 8-00

ಮುದ್ರಕರು
ಶ್ರೀ ಸದ್ಗುರು ಪ್ರಿಂಟರ್ಸ್
ರಾಮಾನುಜ ರಸ್ತೆ, ಮೈಸೂರು 570004

# ಅರಿಕೆ

ಬಹುಕಾಲದ ಹಿಂದೆ ಪ್ರಾರಂಭಗೊಂಡ ಈ 'ಯಕ್ಷರೂಪಕ' ಇದೀಗ ಮುಗಿದು ಪ್ರಕಟವಾಗುತ್ತಿದೆ. ಈ ದೀರ್ಘಾವಧಿಯಲ್ಲಿ ಇದರ ಮೂಲ ಪ್ರೇರಣೆಯ ಸ್ವರೂಪ ನನಗೀಗ ಸ್ಪಷ್ಟವಾಗಿ ಗೋಚರಿಸುತ್ತಿಲ್ಲ. ಹರಿಶ್ಚಂದ್ರನ ಕಥೆ ಬಹು ಪುರಾತನವಾದ ಕಥೆ. ಅದರ ಬುಡ ವೇದದಲ್ಲಿದೆ; ಅದರ ಶಾಖೋಪಶಾಖೆಗಳು ಪುರಾಣಗಳಲ್ಲಿ ಹಬ್ಬಿವೆ. ಮಹಾಕವಿ ರಾಘವಾಂಕನು ತನ್ನ ಕೃತಿಯಲ್ಲಿ ಅದಕ್ಕೆ ವಸಂತೋದಯವನ್ನು ತಂದಿದಾನೆ. ತಮ್ಮ ಬಾಲ್ಯದಲ್ಲಿ ಮಹಾತ್ಮ ಗಾಂಧಿಯವರು ಈ ನಾಟಕವನ್ನು ನೋಡಿ ಕಣ್ಣೀರು ಸುರಿಸಿದರು. ಸಂಸ್ಕೃತದ 'ಚಂಡಕೌಶಿಕ'ದ ಪ್ರಭಾವದಿಂದಾಗಿ ನಮ್ಮ ರಂಗಭೂಮಿಗೂ ಈ ನಾಟಕ ಅಪರಿಚಿತವಲ್ಲ. ಹೀಗೆ ನಮ್ಮ ಭಾರತೀಯ ಸಂಸ್ಕೃತಿಯ ಆದಿಕಾಲದಿಂದ ಇಂದಿನವರೆಗೆ ಸತತವಾಗಿ ನಮ್ಮ ಸ್ಮರಣೆಗೂ ಕಾವ್ಯಸ್ಫೂರ್ತಿಗೂ ಒದಗಿ ಬರುತ್ತಿರುವ ಹರಿಶ್ಚಂದ್ರನ ಕಥೆ ಆಧುನಿಕನಾದ ನನ್ನ ಮನಸ್ಸನ್ನೂ ಹೊಕ್ಕು ಅಲ್ಲಿ ಬಹಳ ಕಾಲ ತಂಗಿದ್ದು ಆಗಾಗ ಅಷ್ಟಷ್ಟು ಆಕಾರ ಪಡೆದು ಕವಲು ದಾರಿಗಳಲ್ಲಿ ತೊಳಲಿ ಬಂದೆಡೆಗೇ ಮರಳುತ್ತಾ ಕೊನೆಗೊಂದು ಜಾಡು ಹಿಡಿದು ಈಗಿನ ರೂಪದಲ್ಲಿ ಮುಗಿವುಗೊಂಡಿದೆ. ಸಹೃದಯರು ಇದಕ್ಕೆ ಹೇಗೆ ಪ್ರತಿವರ್ತಿಸುತ್ತಾರೋ ನೋಡಬೇಕು. ಹಳೆಯ ಕಥೆ ಎಂದ ಮಾತ್ರಕ್ಕೇ ಪ್ರಾಯಶಃ ರಸಜ್ಞರು ಬೇಸರಿಸರು. ಸೂತ ಪುರಾಣಿಕನನ್ನು ಕುರಿತು ಆತನನ್ನು ಕಥೆ ಹೇಳೆಂದು ಮುನಿಗಳು ಪ್ರೋತ್ಸಾಹಿಸುವ ಒಂದು ಭಾಗವತ ಶ್ಲೋಕ ಈಗ ನೆನಪಿಗೆ ಬರುತ್ತದೆ:

> ವಯಂತು ನ ವಿತೃಪ್ಯಾಮ ಉತ್ತಮಶ್ಲೋಕವಿಕ್ರಮೇ ।
> ಯಚ್ಛೃಣ್ವತಾಂ ರಸಜ್ಞಾನಾಂ ಸ್ವಾದುಸ್ವಾದು ಪದೇಪದೇ ॥

'ಉತ್ತಮಶ್ಲೋಕನಾದ ಮಹಾಪುರುಷನ ಜಯದ ವಿಷಯವನ್ನು ಎಷ್ಟು ಕೇಳಿದರೂ ನಮಗೆ ತೃಪ್ತಿಯಿಲ್ಲ. ರಸಜ್ಞರಿಗೆ ಅದು ಅಡಿಗಡಿಗೂ ತುಂಬ ಸವಿ.' ಇಂಥ ರಸಜ್ಞರಿಗೆ ಈ ಮೌಲ್ಯವಿಪ್ಲವದ ಕಾಲದಲ್ಲೂ ಕೊರತೆಯಿಲ್ಲ ಎಂಬುದು ನನ್ನ ತಾರ್ಕಣೆಗೆ ಬಂದಿದೆ. ಅಷ್ಟೇ ಅಲ್ಲ, ಪರಮಮೌಲ್ಯ ನಿಧಿಗಳಾದ ನಮ್ಮ ಪುರಾತನ ಕಥೆಗಳನ್ನು ಈಗಿನ ಕಾಲಕ್ಕೆ ತಕ್ಕಂತೆ ಒಗ್ಗಿಸಿಕೊಂಡು ಆಧುನಿಕ ಪರಿಸರದಲ್ಲಿ ಆ ಮೌಲ್ಯಗಳು ಹುಲುಸುವಂತೆ ಪುನಃ ಕಥನಕ್ಕೂ ಇದೇ ಬಹು ಸಮೀಚೀನಕಾಲವೆಂದೂ ನನಗೆನ್ನಿಸಿದೆ. ಏಕೆಂದರೆ,

ಒಂದು ನಾಡಿನ ಪುರಾತನ ಸಂಸ್ಕೃತಿ ಪ್ರತಿಯೊಂದು ತಲೆಮಾರಿನಲ್ಲೂ ಮರಳಿ ಮರಳಿ ಉದಿಸಿ ನವೀಕೃತವಾದ ಹೊರತು ಅದಕ್ಕೆ ಜೀವಿಕೆಯೇ ಇಲ್ಲ, ನಮಗೆ ಆತ್ಮ ದಾರಿದ್ರ್ಯವೂ ತಪ್ಪದು.

ಈ ಕಥೆಯ ಮೂಲಸಮಸ್ಯೆ ಹರಿಶ್ಚಂದ್ರ ಮತ್ತು ವಿಶ್ವಾಮಿತ್ರ ಮಹರ್ಷಿಗಳ ಪೂರ್ವಾಪರ ಚರಿತ್ರೆಗಳಲ್ಲಿ ವಿರುದ್ಧಾಂಶಗಳಿದ್ದು ಅವು, ಅದರಲ್ಲೂ ವಿಶ್ವಾಮಿತ್ರನ ಪ್ರಸಂಗದಲ್ಲಿ, ಅಪರಿಹಾರ್ಯಗಳೆಂಬಂತೆ ತೋರಿಬರುವುದರಲ್ಲಿ ಅಡಗಿದೆ. ಹರಿಶ್ಚಂದ್ರನ ವಿಷಯದಲ್ಲಿ ಪೂರ್ವಾಪರಸಾಮರಸ್ಯ ಅಷ್ಟು ಕ್ಲೇಶದಾಯಕವಾಗಿಲ್ಲ. ಪ್ರಕೃತ್ಯಾ ಆತ ಧರ್ಮಿಷ್ಠ; ಆದರೆ ಋಷಿಯಾಗಲು ಬೇಕಾದ ತ್ಯಾಗ ತಪ ವಿರಕ್ತಿಗಳೂ ಸಹನೆಯೂ ಆತನಲ್ಲಿ ಮೊದಮೊದಲು ಅಷ್ಟಾಗಿ ಕಂಡುಬಾರವು. ಮಗನನ್ನು ಬಲಿಕೊಡುವೆನೆಂದು ತಾನು ವರಪ್ರದಾತನಾದ ವರುಣನಿಗೆ ಕೊಟ್ಟ ಭಾಷೆಯನ್ನು ಸಲ್ಲಿಸಲು ಆತನಿಗೆ ಮನಸ್ಸಿದ್ದರೂ ಪುತ್ರವ್ಯಾಮೋಹದಿಂದ ಅದನ್ನು ಆದಷ್ಟು ಮುಂದಕ್ಕೆ ತಳ್ಳಲು ಯತ್ನಿಸುತ್ತಾನೆ. ಆ ಮಗ, ತನ್ನನ್ನು ಬಲಿಕೊಡುತ್ತಾರೆಂದು ತಿಳಿದು, ಕಾಡಿಗೆ ಓಡಿಹೋದುದು ಹರಿಶ್ಚಂದ್ರನ ತಪ್ಪಲ್ಲ. ಅದಕ್ಕೆ ಪ್ರತಿಯಾಗಿ ಆತ ವರುಣನ ಕೋಪಕ್ಕೆ ಈಡಾಗಿ ಜಲೋದರ ವ್ಯಾಧಿಗೆ ತುತ್ತಾಗುತ್ತಾನೆ. ಪಿತೃವತ್ಸಲನಾದ ರೋಹಿತಾಶ್ವ ಸಹ ಅಂಥ ವಂಚಕನೇನಲ್ಲ. ತಂದೆ ಹೀಗೆ ಜಾಡ್ಯಗ್ರಸ್ತನಾದುದನ್ನು ಕೇಳಿ ರಾಜಧಾನಿಗೆ ಹಿಂದಿರುಗುತ್ತಾನೆ. ಹರಿಶ್ಚಂದ್ರ ವರುಣದೇವರ ಮನಸ್ಸನ್ನು ಒಲಿಸಿ ಒಪ್ಪಿಸಿಯೇ ತನ್ನ ಮಗನಿಗೆ ಪ್ರತಿಯಾಗಿ ಬೇರೊಬ್ಬನನ್ನು ಆಹುತಿಗಾಗಿ ಹುಡುಕಲು ಯತ್ನಿಸುತ್ತಾನೆ. ಎಂದರೆ, ಸಾಧ್ಯವಾದಷ್ಟು ಧರ್ಮಮಾರ್ಗದಲ್ಲಿ ನಡೆಯಬೇಕೆಂಬುದೇ ಆತನ ಮನಃಪ್ರವೃತ್ತಿ. ಸಾಧು ಸಂತ ಶರಣರ ಪೂರ್ವಚರಿತ್ರೆಯಲ್ಲೂ ಸಹ ಕೆಲವು ದೌರ್ಬಲ್ಯಗಳು ಕಂಡುಬರುತ್ತವೆ; ಆದರೆ ಅವುಗಳನ್ನು ಕಳೆದುಕೊಂಡು ಏರುವ ಸಾಮರ್ಥ್ಯ ಅವರಿಗುಂಟು. ವಿಶ್ವಾಮಿತ್ರ ಋಷಿ ಈ ಹರಿಶ್ಚಂದ್ರನ ಜೀವನವನ್ನು ಈ ರೀತಿಯಲ್ಲಿ ತಾಗಿ ಈತನ ಸತ್ಯವಚನನಿಷ್ಠೆಯನ್ನೂ ಧರ್ಮಮಾರ್ಗಪ್ರವೃತ್ತಿಯನ್ನೂ ದೃಢಗೊಳಿಸಿದ, ಅಷ್ಟೆ. ವಸಿಷ್ಠ ಮಹರ್ಷಿಗೆ ಹರಿಶ್ಚಂದ್ರನ ಈ ಧರ್ಮನಿಷ್ಠೆಯ ಅರಿವುಂಟು; ಏಕೆಂದರೂ ಆತನ ಮನಸ್ಸು, ಆ ಕಥಾಪ್ರಸಂಗದ ಸಮಯದಲ್ಲಿ ವಿಶ್ವಾಮಿತ್ರನದಕ್ಕಿಂತ ಹೆಚ್ಚು ಪ್ರಶಾಂತವಾದುದು, ದೃಷ್ಟಿ ಹೆಚ್ಚು ವಿಶದವಾದುದು; ಆತನ ಇರವಿನ ನಿಲುವೆಯೂ ಕೌಶಿಕನದಕ್ಕಿಂತ ಆಗ ಹೆಚ್ಚಿನ ಮಟ್ಟದ್ದು. ವಿಶ್ವಾಮಿತ್ರನಿಗೋ, ತನ್ನಿಂದ ಉಪಕೃತನಾದ ಹರಿಶ್ಚಂದ್ರನ ವಿಷಯದಲ್ಲಿ ಆತ ತುಂಬ

ದೊಡ್ಡವ, ತನಗೂ ಸಮಾನನಾಗಬಲ್ಲವ, ಎಂಬ ಕುಶಲ ದೃಷ್ಟಿ ತಾನು ಆತ
ನಿಗೆ ತೋರಿದ ಮರುಕದಿಂದಲೇ, ಉಪಕೃತಿಯ ಸ್ಮರಣೆಯಿಂದಲೇ, ಆಚ್ಛಾ
ದಿತವಾಗಿ ತನ್ನ ವೈಶದ್ಯವನ್ನು ಸ್ವಲ್ಪ ಕಳೆದುಕೊಂಡಿತ್ತು ಎನ್ನಬೇಕು.

ಈ ಕಥಾಪ್ರಸಂಗದಲ್ಲಿ ಕಾಣಿಸಿಕೊಳ್ಳುವ ವಿಶ್ವಾಮಿತ್ರ ಪಾತ್ರದ
ಪ್ರಶ್ನೆ ಕ್ಲಿಷ್ಟತರ. ನನ್ನ ನಾಟಕಕ್ಕೆ ಈಗಿನವರೆಗೆ ಬಿರಿಹಾಕಿದುದೂ ಅದೇ.
ವೇದದಲ್ಲಿ ಗೋಚರಿಸುವ ಶುನಶ್ಶೇಫನ ಪ್ರಸಂಗದಲ್ಲಿ ಆತ ಮಹಾಕರುಣಾ
ಶಾಲಿಯಾಗಿಯೂ ಉದಾರಮಾನವಪ್ರೇಮಿಯಾಗಿಯೂ ಕಾಣಿಸಿಕೊಳ್ಳು
ತ್ತಾನೆ. ರಾಮಾಯಣದ ಬಾಲಕಾಂಡದ ವಿಶ್ವಾಮಿತ್ರ ಬ್ರಹ್ಮರ್ಷಿ ಎಲ್ಲ
ವಿಧದಲ್ಲೂ ನಮ್ಮ ತ್ರಿಕಾಲ ಸ್ಮರಣೆಗೆ ತಕ್ಕವನು. ರಾಮನನ್ನು ಅವತಾರ
ಪುರುಷನನ್ನಾಗಿ ಸಿದ್ಧಗೊಳಿಸಿದ ಗುರು ಈತ. ವಸಿಷ್ಠನಿಗೂ ವಿಶ್ವಾಮಿತ್ರ
ನಿಗೂ ಇದ್ದಿರಬಹುದಾದ ಎಲ್ಲ ಸ್ಪರ್ಧೆಯೂ ತೀರಿ ಒಬ್ಬರನ್ನೊಬ್ಬರು ಅರಿತು
ಕೊಂಡು ಭಾವಿಸಿ, ಸಮಾನತೆಯ ಮೈತ್ರಿಯಿಂದ ಇರುವುದು ಅಲ್ಲಿ ಗೋಚರಿ
ಸುತ್ತದೆ.ವಿಶ್ವಾಮಿತ್ರನಿಗೆ ರಾಮನನ್ನು ಯಾವ ಆತಂಕವೂ ಇಲ್ಲದೆ ಒಪ್ಪಿಸಲು
ದಶರಥನಿಗೆ ಸಲಹೆ ಕೊಡುವವನು ವಸಿಷ್ಠ ಮಹರ್ಷಿ. ಅಲ್ಲಿ ವಿಶ್ವಾಮಿತ್ರ
ಪರಮರ್ಷಿಯಾಗಿಯೂ ಮಹೋಪಕಾರಿಯಾಗಿಯೂ ಪ್ರಸನ್ನನಾಗಿಯೂ
ಶೋಭಿಸುತ್ತಾನೆ. ಹೀಗೆ ಶ್ರುತಿಯಲ್ಲೂ ಆದಿಕಾವ್ಯದಲ್ಲೂ ಶೋಭಾಯ
ಮಾನನಾಗಿರುವ ಮಹರ್ಷಿಗೂ ವಸಿಷ್ಠನ ಮೇಲಣ ಛಲದಿಂದ ವೃಥಾ
ಹರಿಶ್ಚಂದ್ರನನ್ನು ಕಾಡುವ ಚಂಡಕೋಪಿ ವಿಶ್ವಾಮಿತ್ರನಿಗೂ ಏಕಸೂತ್ರತೆ
ಏರ್ಪಡುವುದು ಕಷ್ಟ. ಈ ಏಕಸೂತ್ರತೆಯಿಲ್ಲದೆ ಪರಂಪರೆ ಕಡಿದು ಬೀಳುತ್ತದೆ.
ಈ ಕಷ್ಟದಲ್ಲಿ ನನ್ನ ಮನಸ್ಸು ತೊಳಲಿ ಕೃತಿಯ ಮುಗಿವಿನಲ್ಲಿ ನಾನು ನಿರಾಸೆ
ಗೊಂಡು ಅದರ ಕೈಬಿಟ್ಟು ಬಹು ಕಾಲವಿದ್ದೆ. ಮೊದಲ ಬರವಣಿಗೆಯಲ್ಲಿ,
ಹೆಂಡತಿಯನ್ನು ಕಡಿಯಲು ಕತ್ತಿಯನ್ನೆತ್ತಿದ ಹರಿಶ್ಚಂದ್ರನನ್ನು ತಡೆಯಲು
ಆ ಕೊನೆಗಳಿಗೆಯಲ್ಲಿ ವಿಶ್ವಾಮಿತ್ರನನ್ನು ನಾನು ಪ್ರವೇಶಗೊಳಿಸಿದ್ದೆ. ಆಗ
ನನ್ನ ಮಿತ್ರರು ಯಾವ ಮುನ್ ಸೂಚನೆಯೂ ಇಲ್ಲದೆ ಆ ಪಾತ್ರ ಪ್ರವೇಶದ
ಔಚಿತ್ಯವನ್ನು ನ್ಯಾಯವಾಗಿಯೇ ಪ್ರಶ್ನಿಸಿದರು. ನಾಟಕ ಪುನಶ್ಚಿಂತಿತವಾಗ
ಬೇಕಾಯಿತು. ಆದರೆ ನಾಟಕ ಶ್ಮಶಾನ ಘಟ್ಟದಲ್ಲಿ ಪ್ರಾರಂಭವಾದುದರಿಂದ
ಅಷ್ಟು ಹೊತ್ತಿಗೆ ಹರಿಶ್ಚಂದ್ರ ವಿಶ್ವಾಮಿತ್ರನಿಗೆ ಸಲ್ಲಿಸಬೇಕಾದುದನ್ನೆಲ್ಲ ಸಲ್ಲಿಸಿ
ಆತನ ಕೈತಪ್ಪಿಸಿಕೊಂಡಿದ್ದರಿಂದ, ಆ ಋಷಿಯ ಪ್ರವೇಶವೇ ಒಂದು ಸಮಸ್ಯೆ
ಯಾಯಿತು.

ಹರಿಶ್ಚಂದ್ರನ ಪ್ರಸಂಗದಲ್ಲಿ ವಿಶ್ವಾಮಿತ್ರನದು ನಿಜವಾದ ಕೋಪವೇ

ಅಥವಾ ಕೃತಕವೇ ? ಇವೆರಡೂ ಇಲ್ಲದಿದ್ದರೆ ಆತನ ಮನೋಭಾವ ಎಂಥದು ? ಇದು ಪ್ರಶ್ನೆ. ಕಾಮಕ್ರೋಧಗಳಿಂದ ತಪ್ಪಿಸಿಕೊಂಡವರು ಯಾರೂ ಇಲ್ಲ. ರಾಮಾಯಣದ ವಿಶ್ವಾಮಿತ್ರನ ಕಥೆಯಲ್ಲೂ ಆತ ಮೇನಕೆಯೊಡನೆಯೂ ಘೃತಾಚಿಯೊಡನೆಯೂ ಬಹುಕಾಲವಿದ್ದು ಪುನಃ ಚೇತರಿಸಿಕೊಂಡು ತಪಃಪ್ರವೃತ್ತನಾದ ವೃತ್ತಾಂತವಿದೆ. ಆತ ಕ್ರೋಧವಶನೂ ಹೌದು ; ರಂಭೆಗೂ ತನ್ನ ಪುತ್ರರಿಗೂ ಶಾಪವಿತ್ತ ಪ್ರಕರಣ ಇದನ್ನು ದ್ಯೋತಿಸುತ್ತದೆ. ಮಹಾ ಪುರುಷನಿಗೂ ಸಹ ಕಾಮಕ್ರೋಧಗಳ ಜಯ ಎಷ್ಟೊಂದು ಕಷ್ಟವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಇಂಥ ಮಹಾ ರಾಗಗಳುಳ್ಳದವನಿಂದ ಯಾವ ಮಹಾಕಾರ್ಯವೂ ಈ ಲೋಕದಲ್ಲಿ ಆಗದು. ಇವು ಸ್ವಲ್ಪಕಾಲ ಆತನನ್ನು ಆಕ್ರಮಿಸಿಕೊಂಡಿದ್ದು ಬಿಟ್ಟುಹೋಗುತ್ತವೆ. ಇವುಗಳಿಂದ ವಿಶ್ವಾಮಿತ್ರ ಕ್ರೂರಿಯೆಂಬ ಅನುದಾರನೆಂಬ ಭಾವ ನಮ್ಮ ಮನಸ್ಸಿಗೆ ಬರುವುದಿಲ್ಲ. ಆದರೆ ದೀರ್ಘ ಕೋಪ, ಛಲ, ವೃಥಾ ಹಿಂಸೆ ಇವೆಲ್ಲ ಅನುದಾರ ಮನಸ್ಸಿನ ಪ್ರವೃತ್ತಿಗಳು. ವಿಶ್ವಾಮಿತ್ರ ತಾನೇನಾಗಿದ್ದರೂ ಅನುದಾರಮಾತ್ರ ಅಲ್ಲ. ಕಾವ್ಯಾದಿಗಳಲ್ಲಿನ ಹರಿಶ್ಚಂದ್ರ ಪ್ರಸಂಗದಲ್ಲೋ ಆತನ ಕ್ರೋಧ ನಿಜವಾಗಿದ್ದರೆ ಆತ ಹಿಂಸಕನೂ ಅನುದಾರಿಯೂ ಬರಿ ಛಲಗಾರನೂ ಆಗುತ್ತಾನೆ ; ಕೃತಕವಾಗಿದ್ದರೆ ಹರಿಶ್ಚಂದ್ರನ ವಿಷಯದಲ್ಲಿ ನಮಗೆ ಮೂಡಬೇಕಾದಷ್ಟು ಮರುಕ ಹುಟ್ಟದೆ ಕರುಣರಸಕ್ಕೆ ಭಂಗ ಬಂದು ಕಾವ್ಯ ರುಚಿಕೆಡುವ ಸಂಭವವುಂಟು. ಇದನ್ನು ಅರಿತೇ ಕಾವ್ಯಜ್ಞನಾದ ಮಹಾಕವಿ ರಾಘವಾಂಕನು ಆತನ ಕೋಪಕ್ಕೆ ಕೃತಕತೆಯನ್ನು ತರಲಿಲ್ಲ.* ಅಲ್ಲದೆ ಇವೆರಡೂ ವಿಶ್ವಾಮಿತ್ರನ ಪ್ರಕೃತಿಗೇ ವಿರುದ್ಧವಾದವು. ವಸಿಷ್ಠನ ವಿಷಯದಲ್ಲಿ ಆತನಿಗೆ ಅಲ್ಪ ಸ್ವಲ್ಪ ಅಸಮಾಧಾನವಿರಬಹುದು, ತಾನು ಅವನಷ್ಟು ಶ್ರೇಷ್ಠ ಇನ್ನೂ ಆಗಿಲ್ಲ ಎಂಬ ತಿಳಿವಳಿಕೆಯೇ ತನ್ನ ಮನಸ್ಸಿನಲ್ಲಡಗಿದ್ದು ಈ ಹುರುಡನ್ನು ಹುಟ್ಟುಹಾಕಿರಬಹುದು. ಆದರೆ ಹರಿಶ್ಚಂದ್ರನ ವಿಷಯದಲ್ಲಿ ಆತ ರಾಗ–ದ್ವೇಷ ವಿಮುಕ್ತನಾಗಿ, ಆದರೆ ಸಕುತೂಹಲನಾಗಿ, ಆತನ ಇರವಿನ ನಿಲವು ಎಂಥದು ಎಂಬುದನ್ನು ಅರಿತುಕೊಳ್ಳುವ ತೀವ್ರಾಸಕ್ತಿಯಿಂದ, ನಡೆದುಕೊಳ್ಳುವುದೇ ಆ ಋಷಿಯ

---

* ರಾಘವಾಂಕನ ಕಾವ್ಯದಲ್ಲಿ ಗೋಚರಿಸುವ ವಿಶ್ವಾಮಿತ್ರ ಪಾತ್ರದ ವಿಮರ್ಶೆಯನ್ನು ನನ್ನ ಮಿತ್ರರಾದ ಮಾನ್ವಿ ನರಸಿಂಗರಾಯರು 'ಜೀವನ' ಪತ್ರಿಕೆಯ ಜೂನ್ 1967ರ ಸಂಚಿಕೆಯಲ್ಲಿ ಬಹು ಸಮೀಚೀನವಾಗಿ ಮಾಡಿದ್ದಾರೆ.

ಸ್ವಭಾವಕ್ಕೆ ವಿಹಿತ. ಹಾಗೆ ನಡೆದುಕೊಂಡರೆ ಮಾತ್ರ ಶ್ರುತಿ-ರಾಮಾಯಣಗಳ ವ್ಯಕ್ತಿಗೂ ಹರಿಶ್ಚಂದ್ರ ಪ್ರಸಂಗದ ಈ ವ್ಯಕ್ತಿಗೂ ಏಕ ಸೂತ್ರತೆ ಏರ್ಪಟ್ಟು ಒಂದನ್ನು ಮತ್ತೊಂದು ಮರೆಸದೆ ಏಕೀಭವಿಸಿ ನಿಲ್ಲುತ್ತದೆ. ಈ ದಿಸೆಯಲ್ಲಿ, ಬಹುಕಾಲ ನಡೆಗೆಟ್ಟು ನಿಂತ ನನ್ನ ರೂಪಕ ನನ್ನ ಪ್ರಿಯಮಿತ್ರ ತೀ.ನಂ. ಶ್ರೀ ಅವರು ನಮ್ಮನ್ನು ಅಗಲಿಹೋಗಿ ಮಸಣ ನನ್ನ ಹೃದಯವನ್ನು ಹೊಕ್ಕಿದ್ದ ಕತ್ತಲದಿನಗಳಲ್ಲಿ ಪುನಶ್ಚಿಂತಿತವಾಗಿ ಮಾನಸ ಗಂಗೋತ್ರಿಯ ಈ ಪ್ರಶಾಂತವೂ ಮೈತ್ರೀಭಾವ ಪರಿಪ್ಲುತವೂ ಆದ ಆವರಣದಲ್ಲಿ ಸುಗಮವಾಗಿ ಹರಿದು ನೆಲೆಸೇರಿತು. ಹರಿಶ್ಚಂದ್ರನ ದೃಷ್ಟಿಯಿಂದ ಇದು 'ಸತ್ಯಾಯನ' ಕಥೆ; ವಿಶ್ವಾಮಿತ್ರನ ದೃಷ್ಟಿಯಿಂದ 'ಪ್ರಶಮಾಯನ'ದ್ದು.

ಶ್ರೀಮದ್ಭಾಗವತದಲ್ಲಿ ಮುನಿಗಳನ್ನು ಕುರಿತು 'ಮುನಯಃ ಪ್ರಶಮಾಯನಾಃ' ಎಂಬ ಬಹು ಧ್ವನಿಪೂರ್ಣವಾದ ಮಾತಿದೆ. ವಿಶ್ವಾಮಿತ್ರ ಮುನಿಯ 'ಪ್ರಶಮಾಯನ' ಆತ ವಸಿಷ್ಠನ ಧೇನುವನ್ನು ಅಪೇಕ್ಷಿಸಿ, ಆ ಋಷಿಗೆ ಸೋತು 'ಧಿಕ್‌ಬಲಂ ಕ್ಷತ್ರಿಯಬಲಂ' ಎಂದಂದಿನಿಂದ ಪ್ರಾರಂಭವಾಗುತ್ತದೆ ; ಆತ ವಸಿಷ್ಠನಿಂದ 'ಬ್ರಹ್ಮರ್ಷಿ' ಎನ್ನಿಸಿಕೊಳ್ಳುವವರೆಗೂ ಈ ದಾರಿ ನಡಗೆ ತೀರುವುದಿಲ್ಲ. ಸಿದ್ಧಿಯನ್ನು ಪಡೆದಮೇಲೆ ವಿಶ್ವಾಮಿತ್ರ ವಸಿಷ್ಠನನ್ನು ಬಹುವಾಗಿ ಕೊಂಡಾಡಿ ಪೂಜಿಸಿದನು ಎಂಬ ಮಾತು ರಾಮಾಯಣದ ಬಾಲಕಾಂಡದಲ್ಲಿ ಬರುತ್ತದೆ. ಹರಿಶ್ಚಂದ್ರನ ಪ್ರಸಂಗದಲ್ಲಿ ವಿಶ್ವಾಮಿತ್ರ ತನ್ನ 'ಪ್ರಶಮಾಯನ'ದ ಉಪಾಂತ್ಯಘಟ್ಟದಲ್ಲಿದ್ದಾನೆ,ಈ ನಾಟಕದಲ್ಲಿ. ಹರಿಶ್ಚಂದ್ರನಂತೆ ಆತನೂ ಶೋಧ್ಯ ; ಬ್ರಹ್ಮಾರಾಮನಿಗೆ ಮಾತ್ರವೇ ಲಭ್ಯವಾಗುವ 'ಅನಹಂವಾದಿತ್ವ'ದ ಮಜಲನ್ನು ಅವನಿನ್ನೂ ಮುಟ್ಟಿಲ್ಲ. ಪರಮೇಶ್ವರನ ಪ್ರೇರಣೆಯಿಂದ ವಸಿಷ್ಠ ವಿಶ್ವಾಮಿತ್ರನ ಆತ್ಮಾಭಿಮಾನದ ಛಲವನ್ನು ಕೆರಳಿಸಿ ಎಬ್ಬಿಸಿ ನಿರಸ್ತಗೊಳಿಸಿ, ನಮಗೆ ಸಾಧಾರಣರೆಂದು ತೋರುವ ಮನುಷ್ಯರಲ್ಲೂ ಮಂಗಳವಶೌಲ್ಯಗಳು ಮನೆಮಾಡಿಕೊಂಡು ವಿಕಾಸಕ್ಕೆ ತಕ್ಕ ಅವಕಾಶವನ್ನು ಕಾದುಕುಳಿತಿರುವ ಅಂಶ ಆತನಿಗೆ ಗೋಚರವಾಗುವ ಹಾಗೆ ಮಾಡಿ, ಅಂಥ ವಿಕಾಸಾಶ್ರಯವಾದ ಮಹಾಮಂತ್ರವನ್ನು ದರ್ಶಿಸಲು ಪುನಃ ತಪವಾಂತು ಬ್ರಹ್ಮರ್ಷಿಸಿದ್ಧಿಯನ್ನು ಪಡೆಯಲು ಅನುವಾಗುವಂತೆ ವಿಶ್ವಾಮಿತ್ರನನ್ನು ಸಂಸ್ಕರಿಸುತ್ತಾನೆ. ಈ ಭಾವನೆ ನಾಟಕಕ್ಕೆ ಚಾಲಕವಾಗಿದೆ.

ಈ ರೂಪಕದ ಕಥೆ ಹೀಗೆ ಓಡುತ್ತದೆ :

ಶಿವನಿಗೆ ಮಹರ್ಷಿಗಳೊಡಗೂಡಿ ವಿಶ್ವಪರ್ಯಟನ ಲೀಲೆಯಲ್ಲಿ

ತೊಡಗುವುದು ವಾಡಿಕೆ. ಅಂಥ ಒಂದು ಸಂದರ್ಭದಲ್ಲಿ ದೇವೇಂದ್ರನ ಸಭೆಗೆ ಆತ ಇಷ್ಟಕ್ಕಿದ್ದ ಹಾಗೆ ಮಹರ್ಷಿಪರಿವಾರದೊಡನೆ ಆಗಮಿಸುತ್ತಾನೆ. ಆ ದಿವ್ಯ ಸುಧರ್ಮೆ ಪರಮೇಶ್ವರನನ್ನು ಬಹು ಸಂಭ್ರಮದಿಂದ ಸ್ವಾಗತಿಸುತ್ತದೆ. ತನ್ನ ಸಾನ್ನಿಧ್ಯದ ಆನಂದದಿಂದ ತುಂಬಿ ಕಳೆವೆತ್ತ ಆ ಸಭೆ ಅಂದು ಮಹಾ ದೇವನಿಗೆ ಬಹು ಸುಂದರವಾಗಿ ಕಂಡಿತು. ಆತ ಅನುಕಂಪೆಯಿಂದ ಭೂಮಿ ಯತ್ತ ನೋಡಿ ಆ ಸ್ಥಳದಿಂದ ಈ ದಿವ್ಯ ಸಭೆಗೆ ಬರುವವರು ಇದ್ದಾರೆಯೇ ಎಂದು ಋಷಿ ವೃಂದವನ್ನು ಪ್ರಶ್ನಿಸುತ್ತಾನೆ. ವಿಶ್ವಾಮಿತ್ರ ಆ ವೇಳೆಗೆ ಮಹರ್ಷಿಯಾಗಿ, ಸ್ವರ್ಗ ಮರ್ತ್ಯಗಳಲ್ಲಿ ನಿರಾತಂಕವಾಗಿ ಸಂಚರಿಸುವು ದನ್ನೂ ಶಂಕರನ ಸಾನ್ನಿಧ್ಯ ಸುಖವನ್ನೂ ಸಂಪಾದಿಸಿದವನಾಗಿದ್ದರೂ, ತನ್ನ ಯೋಗ್ಯತೆಯ ವಿಷಯದಲ್ಲಿ ಆತನಿಗೆ ಅತ್ಯಭಿಮಾನ ಇನ್ನೂ ನಿಶ್ಶೇಷವಾಗಿ ಅಳಿದಿರಲಿಲ್ಲ ; ಅದೇ ಆತನ ಬ್ರಹ್ಮರ್ಷಿಪದದ ಏರುವೆಗೂ ಅಡ್ಡಿಯಾಗಿತ್ತು. ಆಗ ಆತನ ಮನಸ್ಸಿಗೆ ಭೂಲೋಕದಿಂದ ಸುಧರ್ಮೆಗೆ ಬರುವ ಸಂಪನ್ನ ನಾರೂ ಕಣ್ಣಿಗೆ ಕಾಣದಾದ. ಶಂಭುವಿಗೆ ಅದೇ ರೀತಿಯಲ್ಲಿಯೇ ತನ್ನ ಮನೋಗತವನ್ನು ವ್ಯಕ್ತಪಡಿಸುತ್ತಾನೆ. ಆದರೆ ವಸಿಷ್ಠನಿಗೆ ಹಾಗೆನಿಸು ವುದಿಲ್ಲ ; ಹರಿಶ್ಚಂದ್ರನಿಗೆ ಅಂಥ ಯೋಗ್ಯತೆಯಿರುವುದು ತಿಳಿದು ಆತನನ್ನು ಮಹಾದೇವನಿಗೆ ತೋರಿಸುತ್ತಾನೆ. ಆದರೆ ಹರಿಶ್ಚಂದ್ರನ ಈ ಮಹಾತ್ಮ್ಯದ ಪ್ರತ್ಯಯ ವಿಶ್ವಾಮಿತ್ರನಿಗಿರಲಿಲ್ಲ–ತನ್ನ ಕನಿಕರಕ್ಕೆ ಪಾತ್ರನಾಗಿದ್ದುದರಿಂದ. ಆ ಭವಬದ್ಧ ಸುತಕಾಮಿಗೆ ಋಷಿಯೋಗ್ಯವಾದ ತ್ಯಾಗತಪೋವಿರಕ್ತಿಗಳು ಇವೆಯೇ, ಆತನಿಗೆ ಸ್ವರ್ಗದ್ವಾರ ತೆರದಿದೆಯೇ, ವಸಿಷ್ಠ ತಮಾಷೆಗೆ ಹೇಳು ತ್ತಾನೋ ನಿಜವನ್ನೇ ನುಡಿಯುತ್ತಿದ್ದಾನೋ ನೋಡಿಯೇ ಬಿಡೋಣ ಎಂದು ಮನಸ್ಸುಮಾಡಿ ತನ್ನ ಇಂಗಿತವನ್ನು ಹರನಿಗೆ ತಿಳಿಸುತ್ತಾನೆ. ಶಿವನೂ ಅದಕ್ಕೆ ಅಸ್ತು ಎನ್ನುತ್ತಾನೆ. ವಸಿಷ್ಠ, ಹರಿಶ್ಚಂದ್ರನು ರಾಜ ಸೂಯ ಯೊಗದ ಅಂತ್ಯದ ದಾನಘಟ್ಟದಲ್ಲಿರುವುದನ್ನು ನೋಡಿ, ಪರೀಕ್ಷೆಗೆ ಇದೇ ತಕ್ಕ ಸಮಯವೆಂದು ವಿಶ್ವಾಮಿತ್ರನಿಗೆ ಸೂಚಿಸಲು, ಆತ ಯಜ್ಞ ಭೂಮಿಗೆ ಅವತರಿಸಿ ತನ್ನ ಐಶ್ವರ್ಯದ ಹಿರಿಮೆಯಲ್ಲಿ ದಾನಮದಾವಿಷ್ಟ ನಾಗಿದ್ದ ರಾಜನಿಂದ ಆತ ತನ್ನ ಸರ್ವಸ್ವ ಕೊಟ್ಟರೂ ಋಣಿಯಾಗಿಯೇ ನಿಲ್ಲುವಂಥ ದಕ್ಷಿಣೆಯನ್ನು ಕೋರಿ ಪಡೆಯುತ್ತಾನೆ. ರಾಜ್ಯಕೋಶಗಳನ್ನು ಕೊಟ್ಟೂ ನಿಂತ ಸಾಲಕ್ಕೆ ಹರಿಶ್ಚಂದ್ರ ತನ್ನ ಹೆಂಡತಿ ಮಕ್ಕಳನ್ನೂ ತನ್ನನ್ನೂ ಮಾರಿಕೊಂಡು ಚಂಡಾಳನಾಳಾಗಿ ಶ್ಮಶಾನದಲ್ಲಿ ನಿಲ್ಲಬೇಕಾಗುತ್ತದೆ. ಹೀಗೆ ಋಣದಿಂದ ಮುಕ್ತನಾದ ಹರಿಶ್ಚಂದ್ರನನ್ನು ಕಂಡು ಆತನ ಅಸಾಧಾರಣ

ಸತ್ತ್ವಕ್ಕೆ ವಿಶ್ವಾಮಿತ್ರ ಬೆರಗಾಗಿ ಚಿಂತೆಗೀಡಾಗುತ್ತಾನೆ. ತನಗೆ ತಿಳಿದ ಹಾಗೆ ಈತ ಸಾಧಾರಣ ಮನುಷ್ಯ; ಈತನಲ್ಲಿ ಅಡಗಿದ್ದ ಈ ಸಾಮರ್ಥ್ಯವನ್ನು ವಸಿಷ್ಠ ಕಂಡುಕೊಂಡನಲ್ಲ. ತನಗೆ ಕಾಣದೆ ಹೋಯಿತಲ್ಲ ; ತನ್ನ ಯಾವ ದೌರ್ಬಲ್ಯದಿಂದ ಈ ವಿಶದ ದೃಷ್ಟಿ ತನಗಾಗಲಿಲ್ಲ ; ಈ ದೊರೆಯಲ್ಲಿ ಮತ್ತಾವ ದೌರ್ಬಲ್ಯಗಳೂ ಇಲ್ಲವೆ? ತಾನು ಗೆದ್ದಿರುವ ಪತ್ನೀಸುತ ಮೋಹವಾದಗೂ ಈತನಲ್ಲಿ ಉಳಿದಿದ್ದು ಆ ಮೋಹಗಳು ಈತನ ಸತ್ಯನಿಷ್ಠೆಯನ್ನು ಕೆಡಿಸಬಹುದಲ್ಲ; ತನ್ನ ಕೈತಪ್ಪಿದ ಈತನನ್ನು ಈ ವಿಷಯದಲ್ಲಿ ಪರೀಕ್ಷಿಸುವ ಬಗೆ ಹೇಗೆ? ಈ ಚಿಂತೆಯಲ್ಲಿರುವ ವಿಶ್ವಾಮಿತ್ರನಿಗೆ ಮೂವರ ನೆನಪು ಬರುತ್ತದೆ : ಆ ಶ್ಮಶಾನದಲ್ಲೇ ಇದ್ದುಕೊಂಡು ಆಥರ್ವಣವಿಧಿಗಳಿಂದ ಬೆಂತರಗಳನ್ನು ವಶಗೊಳಿಸಿ ಅವುಗಳಿಂದಾಗುವ ಅಶುಭಗಳನ್ನು ತಡೆದು ಲೋಕದಲ್ಲಿ ಶುಭಗಳನ್ನು ಹರಡುವ ಕಲ್ಯಾಣಾಕಾಂಕ್ಷೆಯುಳ್ಳ ತನ್ನ ಶಿಷ್ಯರಾದ ಉಪಾಸಿಗಳ ತಂಡವೊಂದು ; ಅಶುಭ ಪಕ್ಷಪಾತಿಗಳಾದ ವ್ಯಂತರಗಳ ಪಡೆಯೊಂದು ; ಜತೆಗೆ ತನ್ನ ನಚ್ಚಿನ ಶಿಷ್ಯ ನಕ್ಷತ್ರಕ. ರಂಗದಲ್ಲಿ ಋಷಿ ತೋರಿಬರುವ ಮೊದಲು 'ಕೋಡಂಗಿ' ಎಂಬ ಯಕ್ಷಗಾನ ಪ್ರಸ್ತುತನಾದ ದೇವದೂತ ಕಥಾಪೀಠಿಕೆಯನ್ನು ಪ್ರಸ್ತಾವನಾ ದೃಶ್ಯದಲ್ಲಿ ನಿರೂಪಿಸುತ್ತಾನೆ. ಬಳಿಕ ವಿಶ್ವಾಮಿತ್ರ ನಕ್ಷತ್ರಕನೊಡನೆ ರಂಗದಲ್ಲಿ ಕಾಣಿಸಿಕೊಳ್ಳುತ್ತಾನೆ. ಆ ಮುಂದೆ ಅಮಂಗಳವನ್ನು ತಡೆಯಬಹುದೆಂಬ ಆಸೆಯನ್ನು ಒಡ್ಡಿ ಹರಿಶ್ಚಂದ್ರನಿಂದ ದಣಿಗೆ ಸಲ್ಲಬೇಕಾದ ಶವದ್ರವ್ಯಗಳನ್ನು ಪಡೆಯುವಂತೆ ಶ್ಮಶಾನ ರುದ್ರೋಪಾಸಿಗಳನ್ನು ಪ್ರೇರಿಸಲು ನಕ್ಷತ್ರಕನನ್ನು ವಿಶ್ವಾಮಿತ್ರ ನಿಯೋಜಿಸುವುದು ; ವ್ಯಂತರಾಧಿಪತಿಯೊಡನೆ ಹರಿಶ್ಚಂದ್ರನನ್ನು ಸತಿಸುತರ ಮೂಲಕ ಹಣ್ಣಿಗೆ ತರುವ ಉಪಾಯವನ್ನು ವಿಶ್ವಾಮಿತ್ರ ಚಿಂತಿಸುವುದು ; ಶ್ಮಶಾನ ರುದ್ರೋಪಾಸಿಗಳನ್ನು ನಕ್ಷತ್ರಕ ಪ್ರೇರಿಸುವುದು ; ಹರಿಶ್ಚಂದ್ರನ ಸ್ವಗತ ಭಾಷಣ ಮತ್ತು ಮಸಣಿಗನಿಂದ ಶ್ಮಶಾನದ ಬಿಟ್ಟಿಯನ್ನು ಬೇಡಲು ಬಂದ ಹೆಣ್ಣೊಬ್ಬಳ ವರ್ಣನೆ ಮತ್ತು ಹರಿಶ್ಚಂದ್ರ ಆಕೆ ಕೊಡಬೇಕಾದ ಶ್ಮಶಾನ ಶುಲ್ಕವನ್ನು ಕೊಡದೆ ಸುಡಗೊಡಲು ಒಪ್ಪದಿರುವುದು ; ಶ್ಮಶಾನ ರುದ್ರೋಪಾಸಿಗಳು ಹರಿಶ್ಚಂದ್ರನನ್ನು ಅಮಂಗಳದ ಪರಿಹಾರಕ್ಕೆ ಶವದ್ರವ್ಯವನ್ನು ಕೋರುವುದು. ಆತನ ನಿರಾಕರಣೆ; ಚಂದ್ರಮತಿಯ ಪ್ರವೇಶ, ಸತಿಪತಿಯರ ಸಮಾಗಮ, ತಾನು ಚಿತೆಯಿಂದ ಒಗೆದ ಶವ ತನ್ನ ಪುತ್ರನದೆಂದು ತಿಳಿದ ಹರಿಶ್ಚಂದ್ರನ ಶೋಕ, ರುದ್ರೋಪಾಸಿಗಳು ಪುನಃ ಶವದ್ರವ್ಯಗಳ ದಾನದಿಂದ ಮಗನನ್ನು ಬದುಕಿಸಬಲ್ಲೆವೆಂದು ಪ್ರಲೋಭಿಸುವುದು, ಸತಿಯ ಪ್ರೇರಣೆ

ಯಂತೆ ಹರಿಶ್ಚಂದ್ರನ ನಿರಾಕರಣೆ; ಚಂದ್ರಮತಿ ಊರ ದೊರೆಯತ್ತ ಮಸಣದ ಬಿಟ್ಟಿಯನ್ನು ಬೇಡಲು ಹೊರಡುವುದು ; ಬೆಂತರಗಳ ಕುಣಿತ, ರುದ್ರೋಪಾಸಿಗಳಿಗೂ ಅವುಗಳ ದೊರೆಗೂ ಸಂಭಾಷಣೆ, ವಿಶ್ವಾಮಿತ್ರ ಪ್ರವೇಶ ಮತ್ತು ಉಪಾಸಿಗಳಿಗೆ ತನ್ನ ಮನೋಗತದ ವಿವರಣೆ; ವೀರಬಾಹು ಪ್ರವೇಶಿಸಿ ದಾರಿಯಲ್ಲಿ ಕಳ್ಳರಿಂದ ಗಾಸಿಗೊಂಡ ದೊರೆಮಗನನ್ನು ಕೊಂದವಳೆಂಬ ದೂರು ಹೊತ್ತು ಮರಣದಂಡನೆಗೆ ಗುರಿಯಾದ ಚಂದ್ರಮತಿಯನ್ನು ಕೊಲ್ಲುವಂತೆ ಹರಿಶ್ಚಂದ್ರನಿಗೆ ನಿಯಮಿಸುವುದು, ಹರಿಶ್ಚಂದ್ರನ ಕಳವಳ ಮತ್ತು ಶೋಕ; ಕೊನೆಗೆ ಹೇಳಿದ್ದನ್ನು ನಡೆಸುವೆನೆಂದು ತಾನು ದಣಿಗೆ ಕೊಟ್ಟ ಮಾತನ್ನು ನೆನೆದು, ಅದನ್ನು ತಪ್ಪಲಾರದೆ ಕಡಿಯಲು ಮನಸ್ಸುಮಾಡಿ ಕತ್ತಿಯನ್ನೆತ್ತಿದ ಹರಿಶ್ಚಂದ್ರನನ್ನು ವಿಶ್ವಾಮಿತ್ರ ತಡೆಯುವುದು; ಆಜ್ಞೆ ಕೊಡುವ ದಣಿ ಬೇರೆ, ನೀನಲ್ಲ ಎಂದು ಹರಿಶ್ಚಂದ್ರ ಪುನರುದ್ಯುಕ್ತನಾಗಲು ವೀರಬಾಹುವೇ ಬಂದು ಆತನನ್ನು ಆ ಕೃತ್ಯದಿಂದ ಬಿಡಿಸುವುದು ; ಹರಿಶ್ಚಂದ್ರನ ಜಯಕ್ಕೆ ವಿಶ್ವಾಮಿತ್ರನ ಆನಂದ, ಆಶೀರ್ವಾದ, ವರಪ್ರದಾನ ; ದೇವವೃಂದದೊಡನೆ ವಸಿಷ್ಠ ಬಂದು ವಿಶ್ವಾಮಿತ್ರ ಹರಿಶ್ಚಂದ್ರರಿಬ್ಬರನ್ನೂ ಮನ್ನಿಸಿರೆಂದು ಕೇಳಿ ಅಭಿನಂದಿಸುವುದು, ಹರಿಶ್ಚಂದ್ರನನ್ನು ಹರಸುವುದು ; ಹರ ಪ್ರತ್ಯಕ್ಷನಾಗುವುದು ; ದೇವವೃಂದ, ಋಷಿವೃಂದ, ವ್ಯಂತರವೃಂದ, ಮಾನವ ವೃಂದಗಳಿಂದ ಹರಸ್ತುತಿ ; ಶಿವಭಂಡಾರವನ್ನೊಡೆದು ಸರ್ವಋದ್ಧಿಕರವಾದ ಮೌಲ್ಯವೊಂದನ್ನು ಮಾನವನಬಾಳಿಗೆ ತಂದ ಹರಿಶ್ಚಂದ್ರನನ್ನು ಕೀರ್ತಿಸುವ ಆನಂದಗಾನ, ಭರತವಾಕ್ಯ—ಹೀಗೆ ದೃಶ್ಯಾವಳಿ ಶ್ಮಶಾನದಲ್ಲಿಯೇ ಮೊದಲಾಗಿ ಶ್ಮಶಾನದಲ್ಲಿಯೇ ಮುಗಿಯುತ್ತದೆ. ಪ್ರಾರಂಭದ ಕರ್ಮಕ್ಷೇತ್ರ ಸಿದ್ಧಿ ಕ್ಷೇತ್ರವಾಗಿ ಪರಿಣಮಿಸುವಂತೆ ಮಾಡುವುದೇ ಈ ಪರಿಶ್ರಮದ ನೆನಸು.

ಮೇಲಣ ವಿವರಣೆಯಿಂದ ನಾನು ಕಥೆಯನ್ನು ಹೆಚ್ಚಾಗಿ ಬದಲಾಯಿಸದಿರುವುದು ವ್ಯಕ್ತವಾದೀತು. ಉದ್ದಿಷ್ಟ ರಸೋದಯಕ್ಕಾಗಿ ಕಥಾವಸ್ತುವನ್ನೂ ರಚನಾ ತಂತ್ರವನ್ನೂ ಅಧ್ಯಕಾಲೋಚಿತವಾಗಿ ವ್ಯತ್ಯಾಸಗೊಳಿಸುವ ಸ್ವಾತಂತ್ರ್ಯ ರಚನೆಕಾರನಿಗೆ ಇದ್ದೇ ಇದೆ. ಆದರೆ ಪುರಾತನ ಕಥೆಯನ್ನು ನವೀಕರಿಸುವುದರಲ್ಲಿ ಆತ ಒಂದು ಎಚ್ಚರಿಕೆಗೆ ಒಳಪಡಬೇಕಾಗುತ್ತದೆ. ಈ ವ್ಯತ್ಯಾಸಗಳಿಂದ ಈ ಉಭಯ ಮೂಲಗಳ ಪಾರಂಪರ್ಯದ ಏಕಸೂತ್ರತೆಗೆ ಭಂಗಬರಬಾರದು. ಏಕೆಂದರೆ, ಈ ಕತೆಗಳು ನಮ್ಮ ಸಾಂಸ್ಕೃತಿಕ ಸಂಪತ್ತಿಗೆ ಆಕರಗಳಾಗಿ ತಲೆಮಾರಿನಿಂದ ತಲೆಮಾರಿಗೆ ಎಲ್ಲೂ ತಂಗದೆ ಹರಿದು ಬರುವಂಥವು ; ನಮ್ಮ ಜನಾಂಗದ ಅಂತಃಕರಣದ ಮೂಲ ದ್ರವ್ಯಗಳಿವು.

ಇವು ನೈ ಪಡೆದು ಬದುಕುವುದು ಆವಶ್ಯಕ. ಪ್ರತಿ ತಲೆಮಾರಿನಲ್ಲಿಯೂ ಪುರಾತನ ಶರೀರವೂ ಮನಸ್ಸೂ ನವೀಕೃತವಾಗುತ್ತಲೇ ಇರುತ್ತವೆ, ತಮ್ಮ ಬಹು ಕಾಲದ ಅವಿಚ್ಛಿನ್ನವೂ ಸಂತತವೂ ಆದ ವಿಕಸನ ಪ್ರಣಾಳಿಕೆಯ ಫಲ ವನ್ನು ಕಳೆದುಕೊಳ್ಳದೆಯೇ. 'ನಾನು' ಎಂದರೆ ನನ್ನ ಹಿಂದಿನ ಎಲ್ಲ ಹಳ ಗಾಲದ ಇರುವಿಕೆ+ನನ್ನ ಇಂದಿನ ಹೊಸ ಇರವು; ಭವಿಷ್ಯದ ಹೊಂಚೂ ಸಹ ನನ್ನಲ್ಲಿ ಮೇಳೈಸಿದೆ. 'ನಾನು' ಎಂದರೆ ನನ್ನ 'ಪ್ರಾಪ್ತಿ' ಮತ್ತು ಅದರಿಂದ ನಿಯಮಿತನಾಗಿಯೂ ಅದರ ನಿಯಾಮಕನಾಗಿಯೂ ಇರುವ ನಾನು. ಅದರಿಂದ ನಿಯಮಿತನಾಗಿರುವಷ್ಟರಮಟ್ಟಿಗೆ ನಾನು ಬದ್ಧ; ಅಸ್ವತಂತ್ರ, ದಾಸ; ನಿಯಾಮಕನಾಗಿರುವಷ್ಟರಮಟ್ಟಿಗೆ ಸ್ವತಂತ್ರ, ಮುಕ್ತ, ಹೆದ್ದಾರಿಯನ್ನು ತುಳಿವ ದಾರಿಗ. ನಮ್ಮ 'ಪ್ರಾಪ್ತಿ'ಗಳ ವಿಚಾರದಲ್ಲಿ ನಾವು ತುಂಬ ಎಚ್ಚರಿಕೆಯಿಂದಿರುವುದು ಅತ್ಯವಶ್ಯ. ಅದರಲ್ಲೂ ಮಾನವನ ಜೀವ ಈ ಲೋಕದಲ್ಲಿ ಪಡುವ ಮಹಾನುಭೂತಿಗಳಿಂದ ಪರ್ಯಾಪ್ತವಾದವು ಗಳಲ್ಲಿ. ಸ್ವಪ್ರಯತ್ನದಿಂದ ಯಾವುದು ಲಬ್ಧವಲ್ಲವೋ ಅದೆ 'ಪ್ರಾಪ್ತಿ'. ಇವು ನಮ್ಮನ್ನು ಹಿಡಿದೆಳೆದಾಡಿ ತಮ್ಮ ಅಡಿಯಾಳಾಗಿ ಮಾಡಿಕೊಂಡು, ತಾವಿಡುವ ಮಿತಿಗಳಿಗೇ ಅಳವಟ್ಟು ಅಲ್ಲಿ ಸುಖಿಸುವಂತೆ ನಮ್ಮನ್ನು ಪಳಗಿ ಸಿದರೆ ಆಗ ನಮ್ಮಲ್ಲಿ ವಿಕಸನ ಪ್ರಕ್ರಿಯೆ ನಿಂತುಹೋಗಿ ಆತ್ಮ ಜಡತೆ ಏರ್ಪ ಡುತ್ತದೆ. ಇದನ್ನು ನಾವು 'ಪ್ರಾಪ್ತಿಭೋಗಾವಸ್ಥೆ' ಎಂದು ಕರೆಯ ಬಹುದು. ಭೋಗ ಎಂದರೆ ಮಿತಿಗಳಲ್ಲಿ ರಮಿಸುವುದೇ ಆಗಿದೆ, ಎಂದರೆ ಕಾಲಖಂಡದಿಂದ ಪರ್ಯಾಪ್ತವಾಗಿರುವ ಶರೀರಾದಿ ವ್ಯವಸ್ಥೆಗಳ ಮಿತಿ ಗಳಲ್ಲೇ ರಮಿಸುತ್ತಿರುವುದು. ಈ ಆತ್ಮಜಡತೆ ನಮ್ಮ ನಿಸರ್ಗಶರಣತೆ, ಸಂಪ್ರದಾಯನಿಷ್ಠೆ, ಭೋಗಪ್ರೀತಿಗಳಲ್ಲಿ ಪ್ರಕಟವಾಗುತ್ತದೆ. ಈ ಮಿತಿ ಗಳನ್ನು ಮುಂಚದೆ ಮಾನವನ ವಿಕಸನ ಪ್ರಣಾಳಿಕೆ ಮುಂದುವರಿಯದು. ಸೃಷ್ಟಿಶಕ್ತಿಗೆ ಕುರುಡೋಣಿಗಳಲ್ಲಿ ಆಸಕ್ತಿಯಿಲ್ಲ. ಆದರೆ ದೈವವಶಾತ್, ಜಡದಲ್ಲೂ ಜೀವದಲ್ಲೂ ಅನೇಕ ಕುರುಡೋಣಿಗಳನ್ನು ರಚಿಸಿರುವ ಸೃಷ್ಟಿಶಕ್ತಿ ಮಾನವ ಚೇತನದ ಅಂತಃಕರಣ ವ್ಯವಸ್ಥೆಯಲ್ಲಿ ಮರಳಿ ತನ್ನ ವಿಕಸನ ಪ್ರಕ್ರಿ ಯೆಯ ಹೆದ್ದಾರಿಯನ್ನು ಮೆಟ್ಟಿ ನಡೆಯುತ್ತಿರುವಂತಿದೆ. ಅದು ನಮ್ಮ ಪುಣ್ಯ. ಅದು ಜಗನ್ನಿಯಾಮಕ ಶಕ್ತಿ ನಮಗಿತ್ತಿರುವ ವರ. ಅದೊಂದು ಹುರುಡು, ಒಂದು ಹೊಣೆ; ಅದು ಮಾನವ ಪ್ರಜ್ಞೆಯನ್ನು ಕಾಲಖಂಡ ಗಳಿಂದ ಪರ್ಯಾಪ್ತಗೊಳ್ಳಲು (Saturated) ಬಿಡುವುದಿಲ್ಲ; ಅಖಂಡ ಕಾಲದ ಸಂಪರ್ಕವನ್ನು ಕಡಿದುಕೊಂಡು ನಮ್ಮ ಪ್ರಾಪ್ತಿಗಳ ಮಿತಿಗಳಲ್ಲೇ

ರಮಿಸುವುದನ್ನೂ ಬಿಡುವುದಿಲ್ಲ. ಭೌತಕ್ಷೇತ್ರದಲ್ಲಿ ನಮ್ಮ ಮಾನುಷ ಶರೀ
ರದ ನಮೂನೆ, ಮಿಕ್ಕೆಲ್ಲ ಮೃಗಪಕ್ಷಿಗಳಂತೆ, ತನ್ನ ನಿಡುಗಾಲದ ವಿಕಾಸ
ಶ್ರೇಣಿಯ ಕಟ್ಟಕಡೆಯ ಪರಿಣತಿಯನ್ನು ಮುಟ್ಟಿ ಅಲ್ಲೇ ನಿಂತುಬಿಟ್ಟಿ
ದ್ದಾಗ್ಯೂ, ಈ ಪರಿಮಿತಿಯನ್ನು ಸೃಷ್ಟಿಶಕ್ತಿ ಆತನ ಬುದ್ಧಿಯ ಮೂಲಕ
ಅನೇಕ ವೈಜ್ಞಾನಿಕ ಸಾಧನೆಗಳಿಂದ ಮುರಿಯಲು ಯತ್ನಿಸುತ್ತದೆ. ಖಚಿತ
ರೂಪಕ್ಕೆ ನಿಂತ ಕಣ್ಣಿನ ನೋಟದ ಮಿತಿಯನ್ನು ಭಂಗಿಸಲು ವಿಜ್ಞಾನಿ-
ತಂತ್ರಜ್ಞ ಅದಕ್ಕೆ ಟೆಲಿಸ್ಕೋಪನ್ನು ಜೋಡಿಸುತ್ತಾನೆ; ಚಲನ ಶಕ್ತಿಗೆ
ಕುದುರೆಗಳನ್ನು ಪಳಗಿಸಿಕೊಳ್ಳುವುದರಿಂದ ಮೊದಲುಗೊಂಡು ವಿಮಾನಾದಿ
ಗಳ ನಿರ್ಮಾಣದವರೆಗೆ ತನ್ನ ಯತ್ನಗಳನ್ನು ಮುಂದುವರಿಸಿ ಇಂಬುಗೊಡು
ತ್ತಾನೆ. ಈ ಪ್ರಯತ್ನಗಳಲ್ಲೆಲ್ಲ ಆತ ತನ್ನ ಪ್ರಾಪ್ತಿಯ ನಾಶಕ್ಕೆ ಪ್ರವೃತ್ತ
ನಾಗುವುದಿಲ್ಲ, ಅದರ ಮಿತಿಯನ್ನು ಭಂಗಿಸಿ ಸ್ವವಿಕಾಸಕ್ಕೆ ನಿಯೋಜಿಸಿ
ಕೊಳ್ಳಲು ಯತ್ನಿಸುತ್ತಾನೆ, ಮತ್ತು ಈ ಯತ್ನದಲ್ಲಿ ತನ್ನ ಆತ್ಮಸಾಮರ್ಥ್ಯ
ವನ್ನೇ ಪ್ರಕಟಿಸುತ್ತಾನೆ. 'ಆತ್ಮ' ಎಂದರೆ ನಮ್ಮ ಮನೋಬುದ್ಧ್ಯಹಂಕಾರ
ಯುಕ್ತ ಅಂತಃಕರಣ ವ್ಯವಸ್ಥೆಯನ್ನು ಸೃಷ್ಟಿಶಕ್ತಿಯ ಅಧಿಷ್ಠಾನವನ್ನಾಗಿಸಿ
ವಿಕಾಸೋನ್ಮುಖವಾಗಿ ನಿಯೋಜಿಸುವ ನಮ್ಮರಿವಿನ ಪರಮಸತ್ತ್ವ. ಮಿತಿ
ಭಂಗವೇ, ಪ್ರಾಪ್ತಿ. ಪರಿಷ್ಕರಣವೇ, ಆತ್ಮಸಾಮರ್ಥ್ಯದ ಕುರುಹು. ಪ್ರಾಪ್ತಿ
ಗಳ ವಶಕ್ಕೆ ನಮ್ಮನ್ನು ಸಂಪೂರ್ಣವಾಗಿ ಬಿಡದಿರುವುದೇ ಅದರ ಉದ್ಯಮ.
ಮೃಗಪಕ್ಷಿಗಳಿಗೆ ಈ ಶಕ್ತಿಯಿಲ್ಲ; ಅವು ತಮ್ಮ ಪರ್ಯಾಪ್ತ-ಅಂಗಗಳು
ತಮಗಿಡುವ ನಿರ್ಬಂಧಗಳನ್ನೊಪ್ಪಿಕೊಂಡು ಆ ಮಿತಿಗಳಲ್ಲಿಯೇ ರಮಿಸುವು
ದನ್ನು ಕಲಿತಿವೆ. ಅವು ಹುಟ್ಟುತ್ತಿರಬಹುದು, ಸಾಯುತ್ತಿರಬಹುದು.
ಅವುಗಳ ಹುಟ್ಟುಸಾವಿನಿಂದ ಸೃಷ್ಟಿಶಕ್ತಿಯ ವಿಕಸನ ಪ್ರಕ್ರಿಯೆಗೆ ಒಂದು
ಕಾಲದ ಅವಧಿಯಲ್ಲಿ ಸಹಾಯವೂ ಸಂಪನ್ನತೆಯೂ ಒದಗಿರಬಹುದು.
ಆದರೆ ಆ ಕಾಲ ತೀರಿ ಬಹುವೇಳೆಯಾಗಿದೆ. ಈಗ ಅವುಗಳ ಜನನ ಮರಣ
ದಿಂದ ನೇರವಾಗಿ ಆ ಶಕ್ತಿಗೆ ಯಾವ ಪ್ರಯೋಜನವೂ ಇರುವಂತೆ ತೋರು
ವುದಿಲ್ಲ: ಈ ವಿಕಾಸ ಪರ್ಯಾಪ್ತತೆ, ಅಥವಾ ಕಾಲಾಸ್ವಾದನ ಪರ್ಯಾ
ಪ್ತತೆ, ಮನುಷ್ಯನ ಅಂತಃಕರಣ ವ್ಯವಸ್ಥೆಗೂ ಸೋಕಿದ್ದರೆ ಆತನೂ ಸಹ
ಮೃಗಪಕ್ಷಿಗಳಂತೆಯೇ ಆಗುತ್ತಿದ್ದ. ಮೃಗಪಕ್ಷಿಗಳ ಪರ್ಯಾಪ್ತತೆಯೇ
ಅವುಗಳನ್ನು ಮನುಷ್ಯನ ಹಿಡಿತಕ್ಕೆ ತಂದೊಪ್ಪಿಸಿದೆ. ಆತ ಪ್ರಾಣಿಗಳನ್ನು
ಪಳಗಿಸ ಹೊರಟದ್ದು ಅವುಗಳ ಪ್ರಯೋಜನಕ್ಕಾಗಿ ಅಲ್ಲ, ಅವುಗಳ
ವಿಕಾಸವನ್ನು ಕುದುರಿಸುವುದಕ್ಕಲ್ಲ; ಅವು ತನ್ನ ವಿಕಾಸಕ್ಕೆ, ಮಿತಿಭಂಗಕ್ಕೆ,

ಉಪಯೋಗವಾಗಲೆಂದು. ಆತನ ಜ್ಞಾನ ಮತ್ತು ಸುಖಕ್ಕೆ ಒದಗದಲ್ಲದೆ ಅವುಗಳಿಗೆ ಉಳಿಗಾಲವೂ ಇಲ್ಲ. ಪರ್ಯಾಪ್ತವಸ್ತುಗಳೆಲ್ಲವುಗಳ ಗತಿಯೂ ಹೀಗೆಯೇ. ವಿಷಯಕ್ಷೇತ್ರದಲ್ಲಿನ ಈ ಮಿತಿಗಳನ್ನು ಮುರಿದು ತನ್ನ ಪ್ರಗತಿಗೆ ಬಳಸಿಕೊಳ್ಳುವುದರಲ್ಲಿದೆ ಮಾನವನ ವೈಜ್ಞಾನಿಕ ಪರಿಶ್ರಮವೆಲ್ಲ. ಇದನ್ನು ಬೇಕಾದರೆ ಆತ್ಮದ 'ಭೌತಧರ್ಮಾಯನ' ಅಥವಾ 'ವಿಷಯ ಧರ್ಮಾಯನ' ಇಲ್ಲವೇ 'ಋತಾಯನ' ಎಂದು ಕರೆಯಬಹುದು. ಇದರಿಂದ ಆತನ ಜ್ಞಾನಾಕರತೆ ಹೆಚ್ಚುತ್ತದೆ. ಜಡಲೋಕದಲ್ಲಾಗಲಿ ಜೀವಲೋಕದಲ್ಲಾಗಲಿ ಅಂತರಿಕ್ಷದಲ್ಲಾಗಲಿ ಆತ ನಡೆಸುವ ಅನ್ವೇಷಣೆಯೆಲ್ಲ ಹಿಂದಿನ ಕಾಲವನ್ನು ಇಂದಿನ ಪ್ರಜ್ಞೆಗೆ ಹೊಂದಿಸಿಕೊಂಡು ಅಖಂಡಕಾಲ ಪ್ರವಾಹದಲ್ಲಿ ತಾನು ಈಸಾಡುವ ಬಯಕೆಯನ್ನೇ ದ್ಯೋತಿಸುತ್ತದೆ. ಪ್ರಾಪ್ತಿಮಗ್ನರಿಗೆ ಇದು ಸಾಗದ ಮಾತು ; ತಪಸ್ವಿಗಳಿಗೆ ಮಾತ್ರ ಅಳವಡುವಂಥದು. ಈ ಭೌತಾಯನ ಯಾವ ನಿಲುವನ್ನು ಮುಟ್ಟುತ್ತದೋ, ಅದರ ಪರ್ಯಾಪ್ತತೆಗೆ ನಮ್ಮ ಆತ್ಮಶಕ್ತಿ ಮತ್ತಾವ ರೀತಿಯಲ್ಲಿ ಪ್ರತಿಭಟಿಸುತ್ತದೋ ಈಗ ಗೋಚರಿಸದು. ಆದರೆ ಮಾನವನ ಆತ್ಮವಿಕಸನ ಪ್ರಕ್ರಿಯೆಯ ಎರಡು ಹೆದ್ದಾರಿಗಳಲ್ಲಿ ಈ ಭೌತಾಯನವೊಂದು ಎಂಬುದು ನಿಶ್ಚಯ. ವಿಜ್ಞಾನ ಮತ್ತು ತಂತ್ರಕಲೆ ಒಂದು ಆಧ್ಯಾತ್ಮಿಕ ಪರಿಶ್ರಮದ ನೆನಸು.

ಇದೇ ರೀತಿಯಲ್ಲಿ ಸೃಷ್ಟಿಶಕ್ತಿ ಮಾನವನ ಅಂತಃಕರಣವನ್ನೇ ತನ್ನ ವಿಕಸನಪ್ರಕ್ರಿಯಾಕೇಂದ್ರವನ್ನಾಗಿ ಮಾಡಿಕೊಂಡು ಮತ್ತೊಂದು ಅಯನಕ್ಕೆ ಹೊರಡುತ್ತಿದೆ—ಅದು ಆತ್ಮದ ಭಾವಧರ್ಮಾಯನ ಅಥವಾ ಮೌಲ್ಯಾಯನ ; ಗುರಿ ಮಾನವನ ಆನಂದ ವೃದ್ಧಿ. ಮನೋಬುದ್ಧ್ಯಹಂಕಾರಗಳ ಈ ದಿಸೆಯ ವಿಕಸನೋದ್ಯಮದ ಫಲವಾಗಿ ಇತಿಹಾಸ ಪುರಾಣಗಳು ಕಲ್ಪಾಗಮಗಳು ಸಾಹಿತ್ಯ ಸಂಗೀತ ಶಿಲ್ಪಾದಿ ಕಲೆಗಳು ಹುಟ್ಟಿಕೊಳ್ಳುತ್ತಾ, ವಿಪುಲಾನುಭೂತಿಗಳಿಗೆ ಇಂಬಾಗುತ್ತಾ ಆಗುತ್ತಾ ಪರ್ಯಾಪ್ತತೆಯ ಘಟ್ಟವನ್ನು ಮುಟ್ಟುತ್ತವೆ. ಮನಸ್ಸು ತನ್ನ ಕುತೂಹಲ ಮತ್ತು ಆಸಕ್ತಿಗಳ ವಿಷಯದಲ್ಲಿ, ಬುದ್ಧಿ ತನ್ನ ವಿಚಾರ ಹಾಗೂ ಚಿಂತನೆಗಳ ವಿಷಯದಲ್ಲಿ, ಅಹಂಕಾರ ತನ್ನ ಭಾವನಾ ಮತ್ತು ರುಚಿಗಳ ವಿಷಯದಲ್ಲ ಒಂದು ನಿಲುವನ್ನು ಮುಟ್ಟಿ ತನ್ನ ಕಾಲಾಸ್ವಾದನ ಪಿಪಾಸೆಯನ್ನು ಕಳೆದುಕೊಳ್ಳುತ್ತದೆ. ಮಾನವ ಚೇತನ ತನ್ನ ಭಾವಧರ್ಮಾಯನದಲ್ಲಿ 'ಪ್ರಾಪ್ತಿಭೋಗ ಪ್ರಸ್ಥಾನ'ವನ್ನು ಮುಟ್ಟಿರುವ ಸೂಚನೆ ಇದು, ಸಂಪ್ರದಾಯ ನಿಷ್ಠೆ ತಲೆದೋರುವ ಕಾಲ. ನಿಯತಾನುಭೂತಿಗಳ ಪುನಃಪುನರಾವರ್ತನವನ್ನು

ಬಯಸುತ್ತದೆ ಭೋಗ. ಇದು ಅದ್ಯಕಾಲದ ಪ್ರಾಪ್ತಿಗೆ ಸಂಬಂಧಪಟ್ಟ ದ್ದಾದರೆ ಹಿಂದಿನ ಕಾಲದ ಅರಿವನ್ನು ನಮ್ಮ ಪ್ರಜ್ಞೆಯಿಂದ ಕಡಿದು ಹಾಕಿ ಅಷ್ಟು ಕಾಲದ ಆತ್ಮಾನುಭೂತಿ ನಮಗೆ ಒದಗಿಬಾರದಂತೆ ಮಾಡುತ್ತದೆ; ಹಿಂದಿನವಾದರೆ ಇಂದಿನದರಲ್ಲಿ ನಮ್ಮ ಅನಾಸ್ಥೆ ಬೆಳೆದು ಅದು ನಮ್ಮನ್ನು ಸೋಕದೆ ವ್ಯರ್ಥವಾಗುವಂತೆ ಮಾಡುತ್ತದೆ. ಭೋಗ ಎಂದರೆಯೇ ಬಂಧನ, ಮಿತಿಯಲ್ಲಿನ ಅಮಿತಸಕ್ತಿ. ಹೀಗೆ ಪರ್ಯಾಪ್ತಪ್ರಾಪ್ತಿಗಳ ಲಾಲಸೆ ಯಿಂದ ಸಾಮಾನ್ಯ ಮನುಷ್ಯ ಅಖಂಡ ಕಾಲಾಸ್ವಾದನ ವಂಚಿತನಾಗು ತ್ತಾನೆ. ಕಾಲ ಎಂದರೆಯೇ ಕ್ರಿಯಾಸಾಂತತ್ಯ. ಸತತಾಧ್ಯವಸಾಯಿಗೆ ಮಾತ್ರ ಅಖಂಡಕಾಲಾಸ್ವಾದನ ಸಾಧ್ಯ. ಭೌತಧರ್ಮಾಯನ ನಿರತನಾದ ಆತ್ಮಶಾಲಿ ವೈಜ್ಞಾನಿಕ ಹೇಗೆ ತನ್ನ ನೈಸರ್ಗಿಕ ಮಿತಿಗಳಿಗೆ ಅಳವಡದೆ ಅವು ಗಳಿಗೆ ಪ್ರತಿಭಟಿಸಿ ತನ್ನ ಜ್ಞಾನಾಕರತೆಯನ್ನು ಹೆಚ್ಚಿಸಿಕೊಳ್ಳುತ್ತಾನೋ, ಆತ್ಮ ಜಡತೆಯನ್ನು ನಿವಾರಿಸಿಕೊಳ್ಳುತ್ತಾನೋ, ಹಳೆಯದನ್ನೆಲ್ಲ ಅರಿತು ವಿಭಜಿಸಿ ಪರಿಷ್ಕರಿಸಿ ನೂತನವಾಗಿ ಮೇಳೈಸಿ ಸೃಷ್ಟಿಯ ವಿಕಸನ ಪ್ರಕ್ರಿಯೆ ಯನ್ನು ನಡೆಗೊಳಿಸುತ್ತಾನೋ ಅದೇ ರೀತಿಯಲ್ಲಿ ಆತ್ಮಶಾಲಿಯಾದ ಭಾವುಕ ತಪಸ್ವಿ–ಯೋಗಿ ಸಹ ತನ್ನ ಭಾವಧರ್ಮಾಯನದಲ್ಲಿ ಶಾಸ್ತ್ರಾಗಮಕಲ್ಪ ಸಂಪ್ರದಾಯಾದಿಗಳು ತಮ್ಮ ಭಾವಸಂಪದದಿಂದಲೇ ಕಲ್ಪಿಸಿಕೊಳ್ಳುವ ಪರ್ಯಾಪ್ತತೆಯನ್ನು ಸಹಿಸುವುದಿಲ್ಲ. ಆತನ ಮೌಲ್ಯಾಯನ ಇವುಗಳ ಪುನಃಪುನರಾವರ್ತನದಲ್ಲಿ ತಂಗದು. ಇವು ಏರ್ಪಡಿಸುವ ಮಿತಿಗಳನ್ನು ಭಂಗಿಸಿದಲ್ಲದೆ ಆತ ಸ್ವಸ್ಥನಾಗಲಾರ. ಇವಕ್ಕೆ ಪ್ರತಿಭಟಿಸುವುದರಲ್ಲಿ ಆತ ತನ್ನ ಅಂತಃಕರಣದಲ್ಲಿ ಪ್ರವೃತ್ತವಾಗಿರುವ ಸೃಷ್ಟಿಶಕ್ತಿಯ ವಿಕಸನ ಪ್ರಕ್ರಿ ಯೆಯ ಒಂದು ಪ್ರಸ್ಫುರಣವನ್ನೇ ಪ್ರಕಾಶಪಡಿಸುತ್ತಾನೆ. ಈ ಪ್ರತಿಭಟ ನೆಯೇ ಮಾನವ ಚೇತನದ ವಿಕಾಸಯಾತ್ರೆಯ ವಿಜಯಧ್ವಜ. ಇದು ನಮ್ಮ ಪ್ರಾಪ್ತಿಭೋಗದಲ್ಲಿ ನಮಗೆ ಏರ್ಪಡುವ ಅರುಚಿ ಅತುಷ್ಟಿಗಳಲ್ಲೂ ನವ್ಯತಾಪ್ರೀತಿಯಲ್ಲೂ ವ್ಯಕ್ತವಾಗುತ್ತದೆ. ಮಾನವ ಚೇತನಕ್ಕೆ ಮೌಲ್ಯಾ ಯನದಲ್ಲಿ ಅಖಂಡ ಕಾಲದ ಸಂಸರ್ಗವನ್ನು ಸದಾ ಕಲ್ಪಿಸಿಕೊಡುತ್ತಿರು ವುದು ಯಾವುದೆಂದರೆ, ಹಳತರ ಸಾರಸಂಗ್ರಹದ ಜತೆಗೆ ಈ ಹೊಸತನ ದೊಲವು, ಅದನ್ನು ಕುರಿತ ಅಂತಃಕರಣಾಧ್ಯವಸಾಯ. ಅಖಂಡ-ಅಮಿತ- ಅನಂತವೆಂಬ ಕಾಮಧೇನುವಿನ ಕೆಚ್ಚಲಿಗೆ ಬಾಯಿಕ್ಕುವ ಕರುಗಳು ನಮ್ಮ ಇದ್ದುದರಲ್ಲಿ ಅತುಷ್ಟಿ ತೋರುವ ಆಸೆ, ಹಂಬಲ, ಕನಸು, ಹಾರೈಕೆ ಮತ್ತು ಪ್ರಗತಿಯತ್ನಗಳು. ಮಾನವನಿಗೆ ಈ ಸ್ವಮಿತಿ-ಭಂಗ-ವಿಕ್ರಮ ಇಲ್ಲದಿದ್ದರೆ

ಈ ಲೋಕದಲ್ಲಿ ಏನನ್ನೂ ಸಾಧಿಸಲಾರ. ಸೃಷ್ಟಿ ಶಕ್ತಿಗೆ ಇಷ್ಟೆ ಸಾಕು ಎನ್ನುವವರಲ್ಲಿ ಆಸ್ಥೆಯಿಲ್ಲ. ಇನ್ನೂ ಸಾಲದು ಎಂಬವರಲ್ಲೆ ಆದಕ್ಕೆ ಮಮತೆ. ಈ ಸೃಜನಶಕ್ತಿ ಹಿಂದಿನಕಾಲದಲ್ಲೇ ತನ್ನೆಲ್ಲ ಮಹಿಮೆಯನ್ನೂ ಮೆರೆದು ತನ್ನ ಸತ್ತ್ವವನ್ನೆಲ್ಲಾ ವೆಚ್ಚಮಾಡಿ ಈಗ ನಮ್ಮೆಲ್ಲರನ್ನೂ ಸೃಷ್ಟಿ ಮಾಡುವ ಕೆಲಸದಲ್ಲಿ ಸತ್ತ್ವಗುಂದಿ ಕೇವಲ ಪುನರಾವರ್ತನ ಶೀಲವಾಗಿ ಹೋಗಾಸಕ್ತವಾಗಿದೆ ಎಂದರೆ ಆ ಶಕ್ತಿಗೆ ಇದೇನೂ ಹೊಗಳಿಕೆಯಲ್ಲ; ಅದರ ಲಕ್ಷಣವೂ ಇದಲ್ಲ—ಸೂರ್ಯನಿಗೆ ಕತ್ತಲಂತೆ. ಸೃಷ್ಟಿಶಕ್ತಿಯ ಆತ್ಮವಿಕಸನ ಪ್ರಕ್ರಿಯೆಯಲ್ಲಿ ನಮ್ಮದೂ ಒಂದು ಗಣನಾರ್ಹವಾದ ಪಾತ್ರವಿದೆ. ಇದು ನಾವು ನಮ್ಮ ಪ್ರಾಪ್ತಿಗಳಲ್ಲಿ ಪಡುವ ಅರುಚಿ ಅತೃಪ್ತಿಯಲ್ಲಿ ತೋರಿ ಕೊಳ್ಳುತ್ತದೆ. ಗೀತೆ ಕಾಲಕಾಲಕ್ಕೂ ಒಂದು ಭಾಷ್ಯವನ್ನು ಬೇಡುವುದು ಅದಕ್ಕೆಯೇ, ರಾಮಾಯಣದ ಪುನಃಕರಣ ಮರಳಿಮರಳಿ ನಡೆಯುತ್ತಿರು ವುದೂ ಸಹ. ಭಾರತ ತನ್ನ ವಿಪುಲ ಮತಗಳಿಗೂ ದರ್ಶನ ಸಮಯ ಗಳಿಗೂ ವಿವಿಧ ಕಲ್ಪಾಗಮ ಕಲಾಪದ್ಧತಿಗಳಿಗೂ ಹೆಮ್ಮೆಪಟ್ಟುಕೊಳ್ಳಬೇಕೇ ಹೊರತು ಜುಗುಪ್ಸೆಪಡಸಲ್ಲದು. ಇವು ಅದರ ಆತ್ಮಾಧ್ಯವಸಾಯದ ವೈಭವವನ್ನೇ ಪ್ರಕಟಿಸುತ್ತವೆ, ಆರ್ಷೇಯಪರಂಪರೆಯ ಬೆಂಬದಿಯಲ್ಲೇ. ಇದು ನಮ್ಮ ಭೌತಪ್ರಕೃತಿಯ ವಿವಿಧವೂ ವಿಸ್ತಾರವೂ ಆದ ಸಂಪತ್ತಿನಂತೆ ಭಾವಪ್ರಕೃತಿಯ ಸಂಪತ್ತು. ಮಹಾತ್ಮರೂ ಮಹಾನುಭಾವರೂ ಉದಿಸಿ ನಮ್ಮ ಆತ್ಮಜಡತೆಯನ್ನು ಮುರಿದು ಜಾಗೃತಗೊಳಿಸಿದಾಗ ಇವು ಅವರಿಗೆ ತಮ್ಮ ಸಂಪದವನ್ನೆಲ್ಲ ಅರ್ಪಿಸಲು ಕಾದಿವೆ, ಈ ಹೃದಯ ಖನಿಜಗಳು. ಮಹಾನುಭಾವರಿಂದಲೇ ಧರ್ಮಪ್ರಗತಿ, ಮಹಾಭಾವೋದಯ. ಇದು ಸಮಯಗಳಾಗಿ ಪರ್ಯಾಪ್ತಗೊಂಡಾಗ, ಆ ಸಮಯಗಳೇ ತಮ್ಮ ಮುದ್ರೆ ಯನ್ನೊಡೆಯುವ ಆತ್ಮಶಾಲಿಗಳನ್ನು ಪ್ರತೀಕ್ಷಿಸುತ್ತವೆ. ಮಾನವಚೇತ ನಕ್ಕೆ ಮಿತಿಗಳಲ್ಲಿ ರಮಿಸುವುದೂ ಭೋಗದ ಬಂಧನದಲ್ಲಿ ಅಖಂಡಕಾಲಾ ಸ್ವಾದವಂಚಿತವಾಗುವುದೂ ಸೇರದು. ಅದರ ಯಾತ್ರೆ ಅಮಿತ-ಅಖಂಡ ಅನಂತವನ್ನು ಮುಟ್ಟುವವರೆಗೂ ತೀರದು. ನಾವು ಅಮಿತರಾದಾಗಮಾತ್ರ ಪರಿಪೂರ್ಣರು; ಅದಕ್ಕೆ ಮುಂಚೆ ಆ ದಾರಿಯಲ್ಲಿನ ಬರಿದಾರಿಗರು. ಆದರೆ ಪರ್ಯಾಪ್ತತೆ ಪರಿಪೂರ್ಣತೆಯಲ್ಲ. ಅದು ಹಿಂದೆ ನಿವೇದಿಸಿದಂತೆ ಕಾಲ ದೊಂದು ತಂಗುದಾಣ. ಇಲ್ಲಿಗೆ ಮುಗಿಯಿತು, ಇದೇ ಕೊನೆ, ಇನ್ನು ಮುಂದೆ ಮತ್ತೇನೂ ಇಲ್ಲ ಎಂದು ನಾವು ಸ್ವಸ್ಥರಾದಾಗ ನಾವು ಕುರು ಡೋಣಿಗಳಲ್ಲಿರುತ್ತೇವೆ, ಹೆದ್ದಾರಿಯಲ್ಲಲ್ಲ. ಆಗ ಅದು ಆ ಸಮಾಜ

ಕಲ್ಪಾಗಮ ಕಾವ್ಯಕಲೆ ಮೊದಲಾದುವುಗಳ ಶಾಸ್ತ್ರ ಸಂಪ್ರದಾಯ ನಿಯತ ನಿಷ್ಠೆಯಲ್ಲೋ, ಅದ್ಯತನಕಾಲವಶಾನುಗತಿಯಲ್ಲೋ, ಇಲ್ಲವೇ ಕೇವಲ ಸ್ವಭವಿಷ್ಯ ಕಾತುರತೆಯಲ್ಲೋ ಪ್ರಕಟವಾಗುತ್ತದೆ. ಸಮಾಜದಲ್ಲಿ ಅರಿ ಷಡ್ವರ್ಗ ಪ್ರಬಲಿಸಿ ಆತ್ಮಶಕ್ತಿಯನ್ನು ಕುಂದಿಸುವ ಕಾಲ ಅದು. ಲೋಭ ಮೋಹ ಭಯಗಳು ಅಂತಃಕರಣದ ಜ್ಞಾನಾನಂದಾಕರತೆಗೆ ಹೂಳುಗವಿಸಿ ಅದನ್ನು ಕಿರಿದಾಗಿಸುತ್ತದೆ. ಅಂಥ ಆತ್ಮ ಕಾರ್ಪಣ್ಯದ ಸಮಯಗಳಲ್ಲಿ ವಿಕಸ ನೋಚ್ಛ್ರಾಯದಲ್ಲಿರುವ ಪರ ಸಂಸ್ಕೃತಿ ನಮ್ಮ ಮೇಲೆ ದಾಳಿಯಿಡುವುದು ಸಹಜ. ಅವರು ನಮ್ಮನ್ನು ಮುರಿದು ಸಾಂಸ್ಕೃತಿಕ ಪರಂಪರಾಪ್ರಾಪ್ತ ನಿಧಿ ಗಳನ್ನು ಧ್ವಂಸಮಾಡಿ, ಎಂದರೆ ನಮ್ಮ ಪ್ರಜ್ಞೆಯನ್ನು ಅವುಗಳಿಂದ ಕಡಿದು ಹಾಕಿ, ಮರೆವುತಂದು, ಲೋಭಮೋಹ ಭಯಗಳನ್ನು ವೃದ್ಧಿಸಿ, ತಮ್ಮ ಶ್ರೇಯೋಭಿವೃದ್ಧಿಗಾಗಿ ಅನೇಕ ಪ್ರಲೋಭನಗಳಿಂದ ನಮ್ಮನ್ನು ಪಳಗಿಸಿ ಕೊಳ್ಳಲೆಳಸುವುದೂ ಸಹಜವೇ. ಗಜಾಶ್ವಾದಿಗಳಿಗೆ ನಾವು ಮಾಡುವುದೂ ಇದೇ—ಹಸಿವು ನೀರಡಿಕೆ ಗಾಸಿಗಳಿಂದ ಅವುಗಳ ಹಮ್ಮನ್ನು ಮುರಿದು, ಪ್ರಕೃತಿಯಲ್ಲಿ ಅಲಭ್ಯವಾಗಿ ಮಾನವನಿಂದ ಮಾತ್ರ ಲಭ್ಯವಾಗುವ ಬೇಯಿ ಸಿದ ಹುರುಳಿ ಬೆಲ್ಲ ತೆಂಗಿನಕಾಯಿಗಳ ನುಚ್ಚಿನುಂಡೆ ಮುಂತಾದ ಭೋಗ ಗಳನ್ನು ಅವುಗಳಿಗೆ ನೀಡಿ ಪಳಗಿಸಿಲಾಯದಲ್ಲಿ ಕಟ್ಟುವುದು. ಸೃಷ್ಟಿಶಕ್ತಿ ನಮ್ಮ ಅಂತಃಕರಣದಲ್ಲಿ ತನ್ನ ಮುಂದನ್ನು ಕಾಣದಿದ್ದಾಗ ಮತ್ತೊಂದು ಜನಾಂಗವನ್ನು ಆಶ್ರಯಿಸಲು ಹೊರಡುತ್ತದೆ, ತನ್ನ ಮುಂಬರಿವನ್ನು ಅವರ ಮೂಲಕ ನಡೆಸುತ್ತದೆ. ಆದರೆ ಪುಣ್ಯವಶದಿಂದ ನಮ್ಮ ಜೀವಂತವೂ ಆರ್ಷೇ ಯವೂ ಆದ ಸಂಸ್ಕೃತಿಯಲ್ಲಿ ಆ ಶಕ್ತಿಗೆ ಇಂಬಾಗಿರುವ ಚೇತನಗಳು ಸದಾ ಇರುತ್ತಿವೆ. ವಿಪುಲ ಭಾವಾಕರಗಳಾದ ಮೌಲ್ಯಗಳಿಂದ ಇಡಿಕಿರಿದಿರುವ ಭಾರತದ ಆತ್ಮಸಂಪತ್ತು ಬಹುಕಾಲದಿಂದಲೂ ಅಂಥ ತಪಸ್ವಿಗಳಿಂದ ಅಭಿ ವೃದ್ಧವಾಗುತ್ತಿದ್ದು ಎಲ್ಲ ವಿಪತ್ತುಗಳನ್ನೂ ದಾಟುತ್ತಾ ಅಖಂಡಿತವಾಗಿ ಇಂದಿನವರೆಗೂ ಹರಿದು ಬರುತ್ತಿದೆ. ತಪಸ್ವಿಗಳೇ, ಭೋಗವಿಮುಕರೇ, ನಮಗೆ ಎಲ್ಲ ಕಾಲದಲ್ಲೂ ತಾರಕರು; ಅವರಿಂದಲೇ ನಮ್ಮ ಅರಿಷಡ್ವರ್ಗ ತಗ್ಗಿ ಉದಾರಭಾವಗಳು ಪ್ರವರ್ತಿಸಿ, ನಮ್ಮ ಕುರುಡೋಣಿಗಳು ಮುರಿದು, ಹೆದ್ದಾರಿಗೆ ಸಂಗತವಾಗುವುದು; ನಾವರಿತೋ ಅರಿಯದೆಯೋ ನಮ್ಮ ಬೆನ್ನ ಹಿಂದೆಯೇ ನಿಂತಿರುವ ಅಖಂಡ ಕಾಲಪ್ರವಾಹ ನಮ್ಮ ಪ್ರಜ್ಞೆಯನ್ನೂ ಪ್ಲಾವಿಸುವುದು. ನಮ್ಮ ಆತ್ಮಗ್ಲಾನಿಯನ್ನು ಹೋಗಲಾಡಿಸುವ ವೈದ್ಯರಿ ವರು. ಇವರು ಪ್ರಾಪ್ತಿಲಾಲಸರಲ್ಲ, ಭೋಗಾಲಸರಲ್ಲ, ಅದರಿಂದ ನಿಯುಜ್ಯ

ರಲ್ಲ; ಅದರ ಪರಿಶೋಧಕರು, ಪರಿಷ್ಕಾರಕರು, ಪರಿಚಾಲಕರು. ಈ ಎಂದೂ ಸ್ವತಂತ್ರರು ಯಾವ ದಾಸ್ಯಕ್ಕೂ ಒಗ್ಗಿಕೊಳ್ಳುವವರಲ್ಲ; ಪರದಾಸ್ಯವನ್ನು ಎಂತು ತಾಳಿಯಾರು ? ಈ ಪ್ರತಿಭಟನಾ ಭಟರು ತಮ್ಮ ಮೇಲೆ ಅನ್ಯದೇಶಿಯರು ನಡೆಸಿದ ಘಾತದಿಂದಲೇ ತಮ್ಮ ನಾಡಿನ ಅಂತಃಕರಣ ದೀಪ್ತಿಯ ಮೇಲೆ ಕವಿದಿದ್ದ ಕಿಮಿಟವನ್ನು ಕೊಡಹಿ ಸಾಧಾರಣರಾದ ನಮ್ಮ ಆತ್ಮತೇಜಸ್ಸನ್ನು ಮೆರೆಸಿ ನಮಗೆ ದಾಸ್ಯವಿಮೋಚನೆಯನ್ನು ತಂದರು–ಸ್ವಪ್ರತ್ಯಯ ಯೋಗದಿಂದ, ಸ್ವಸ್ವರೂಪ ಜ್ಞಾನದಿಂದ. ಆಳುತನ ಒಡೆಯತನ ಎಂಬವು ನಮ್ಮ ಮನಸ್ಸಿನ ಒಪ್ಪಿಗೆಯ ಮೇಲೆ ನಡೆಯುತ್ತವೆ. ಮನಸ್ಸು ಗಟ್ಟಿಯಾದರೆ ನಮ್ಮನ್ನು ಯಾರೇನು ಮಾಡಲಾದೀತು ? ಇವರಿಗೆ ಆ ಮನೋದಾರ್ಢ್ಯ ದೊರೆತುದು ತಮ್ಮ ಮನೆ ಮತ್ತು ಸಾಮಾಜಿಕ ಪರಿಸರದ ಮೂಲಕ ತಮ್ಮ ಅಂತಃಕರಣಕ್ಕೆ ತಮ್ಮ ಎಳತನದಲ್ಲಿ ದೊರೆತ ಆರ್ಷೇಯ ಮೌಲ್ಯಗಳ ಸ್ತನ್ಯಪಾನದಿಂದ.

ನಮಗೆ ಈಚೀಚೆಗೆ ಈ ಪುಷ್ಟಿ ದುರ್ಲಭವಾಗುವಂತಿದೆ. ನಮ್ಮ ನಾಡಿನ ಆತ್ಮತೇಜಸ್ಸು ವೃದ್ಧಿಯಾಗಿ,ಪರರ ವರ್ಚಸ್ಸು ಇಲ್ಲಿ ತಗ್ಗಿ ಅವರು ರಾಜಕೀಯ ಕ್ಷೇತ್ರದಿಂದ ಕಾಲ್ತೆಗೆದು ಸ್ವಸ್ಥಾನಕ್ಕೆ ಮರಳಿದಾಗ ತಮ್ಮ ಹಿಂದೆ ತಮ್ಮ ಆತ್ಮಾಯನದ ಕೆಲವು ಪ್ರಾಪ್ತಿಗಳನ್ನು ಇಲ್ಲಿ ಬಿಟ್ಟು ಹೋಗಿದ್ದಾರೆ—ರಾಜಕೀಯ ಮತ್ತು ಆರ್ಥಿಕ ಸಂಸ್ಥೆಗಳು, ಆಡಳಿತ ವ್ಯವಸ್ಥೆಗಳು, ನ್ಯಾಯ ಮತ್ತು ವಿದ್ಯಾಸ್ಥಾನಗಳು, ವಿಜ್ಞಾನ ಹಾಗೂ ಯಂತ್ರವಿದ್ಯೆ ಮತ್ತು ವಸ್ತುಗಳು ; ಎಲ್ಲಕ್ಕೂ ಮಿಗಿಲಾಗಿ ತಮ್ಮ ಅಧ್ಯವಸಾಯ ಸಂಕೇತವಾದ ಭಾಷೆ. ಈ ಅನ್ಯಪ್ರಾಪ್ತಿ ಬಹು ದೊಡ್ಡದು, ಬಹು ಸಮರ್ಥವಾದುದು, ಶ್ರೀಮಂತವಾದುದು. ಅಲ್ಪಾತ್ಮರು ಇವುಗಳ ಭೋಗಲಾಲಸೆಯಲ್ಲಿ ತಂಗಬಹುದೇ ಹೊರತು, ಅವನ್ನು ತಮ್ಮ ಆತ್ಮದ ಋತ–ಸತ್ಯಾಯನಗಳಿಗೆ ಬಳಸಿಕೊಳ್ಳುವುದು ದುಸ್ಸಾಧ್ಯವೆಂದೇ ತೋರುತ್ತದೆ. ಇವು ನಮ್ಮದನ್ನೆಲ್ಲ ಹೀರಿಕೊಂಡು ನಮ್ಮನ್ನು ಜಳ್ಳುಮಾಡುವ ಸಂಭವವೇ ಹೆಚ್ಚು. ಇಂದಿನ ಕಾಲದ ಆತ್ಮಸಂಪದವೆಲ್ಲ ಈ ಪ್ರಬುದ್ಧ ಜನಾಂಗಗಳ ಗಳಿಕೆಯಲ್ಲಿರುವಂತಿದೆ. ಈ ಪ್ರಾಪ್ತಿಲಾಲಸೆಗಳಿಗೆ ಎದುರು ಬಿದ್ದಲ್ಲದೆ ನಮ್ಮ ಆತ್ಮವಂತಿಕೆ, ಆಯತನವಂತಿಕೆ, ನಾಶಹೊಂದಿದರೂ ಹೊಂದೀತೇ. ಎಂದಿಗಿಂತಲೂ ಈಗ ನಮಗೆ ಸ್ವಸ್ವರೂಪಜ್ಞಾನ, ನಾವು ನೆಲೆಯಿಲ್ಲದ ಭಿಕಾರಿಗಳಲ್ಲ ಎಂಬ ನೆನವು,—ಈ ಅನ್ಯಪ್ರಾಪ್ತಿಗಳಿಗೆ ಅಂಟಿಕೊಳ್ಳದೆ ಅವುಗಳಿಂದ ಬಿಡಿಸಿಕೊಂಡು ಅವುಗಳನ್ನೇ ಸ್ವಾಧೀನಪಡಿಸಿಕೊಂಡು ನಮ್ಮ ಸ್ವಧರ್ಮ ಯಾತ್ರೆಯನ್ನು ಮುಂದುವರಿಸ

ಬಲ್ಲೆನೆಂಬ ನಂಬಿಕೆ—ಅವಶ್ಯಕ. ಆತ್ಮನಿಯುಕ್ತವಾಗಿ ನಮ್ಮ ಮನೋ ಬುದ್ಧ್ಯಹಂಕಾರಗಳಲ್ಲಿ ಜರುಗುವ ಸತತಾಧ್ಯವಸಾಯರೂಪವಾದ ವಿಕಸನ ಪ್ರಕ್ರಿಯೆಯಲ್ಲವೆ ಸ್ವಧರ್ಮ ? ಹಿಂದೆ ತನ್ನ ಪರಿಶ್ರಮದಿಂದಲೇ ತಾನು ಪಡೆದ ಅನುಭವಗಳ ಯಾವ ಸಾರವನ್ನೂ ಬಿಡದೆ ತನ್ನಲ್ಲಿ ಅಳವಡಿಸಿಕೊಂಡು ಪರಿಸರಾನುಸಾರವಾಗಿ ಬದಲಾವಣೆ ಹೊಂದುತ್ತಾ ಮುಂದುವರಿಯುವ ಪ್ರಕ್ರಿಯೆಯಲ್ಲವೇ ಕಾಲವನ್ನೇ ಜೀವ ಕುಡಿದು ಬದುಕುವ ವಿಕಸನ ಪ್ರಕ್ರಿಯೆ ? ಇದಕ್ಕೆ ಚ್ಯುತಿಬಂದರೆ ಕೆಡುತ್ತೇವೆ; ಸೃಷ್ಟಿಶಕ್ತಿ ನಮ್ಮನ್ನು ಕೇವಲ ಪರೋಪಯೋಗಿಗಳಾಗುವ ದರ್ಜೆಗಿಳಿಸಿಬಿಡುತ್ತದೆ. ಪರಂಪರಾ ಜ್ಞಾನವಿಲ್ಲದೆ ಆತ್ಮಸಾಮರ್ಥ್ಯವನ್ನು ಗಳಿಸಿಕೊಳ್ಳುವುದು ಕಷ್ಟ. ನಮ್ಮ ಮೂಲದಲ್ಲಿರುವ ಆತ್ಮಸಂಪದ ಅಪಾರ. ಅದರ ಪೂರ್ಣ ಪ್ರಜ್ಞೆಯನ್ನು ಪಡೆದು ನಮ್ಮ ಕುರುಡೋಣಿಗಳನ್ನು ಒಡೆದು, ಹೂಳನ್ನು ತೆಗೆದು, ಹೆದ್ದಾರಿಗೆ ಕಾಲುವೆ ಸವೆದು ಆಧುನಿಕ ಯುಗದ ಈ ಕಾಲಪ್ರವಾಹಕ್ಕೆ ಸಂಗಮ ಗೊಳಿಸಿದ ಹೊರತು ನಮಗೆ ಪ್ರಗತಿಯಿಲ್ಲ. ಪ್ರಬುದ್ಧ ಜನಾಂಗಗಳು ತಮ್ಮ ಪರಂಪರೆಯ ಏಕಸೂತ್ರತೆಯನ್ನು ತಮ್ಮೆಲ್ಲ ಕಾಲದ ಪ್ರಗತಿಪರವಾದ ಬದಲಾವಣೆಗಳಲ್ಲೂ ಕಾಪಾಡಿಕೊಂಡು ಬರಲು ಹೆಣಗುವುದು ತಮ್ಮ ಆತ್ಮಸತ್ತ್ವ ಹೆಚ್ಚಲೆಂದೇ. ತಮ್ಮ ಸಂಗೀತದಲ್ಲೋ ಸಾಹಿತ್ಯ ಶ್ರಮದಲ್ಲೋ ವೇಷದಲ್ಲೋ ಭೂಷೆಯಲ್ಲೋ ಮಾತಿನಲ್ಲೋ ರೀತಿಯಲ್ಲೋ ಆತ್ಮಶಾಲಿಗಳೆಲ್ಲರೂ ತಮ್ಮ ಪರಂಪರೆಯನ್ನು ಉಳಿಸಿಕೊಂಡೇ ಬದುಕುತ್ತಾರೆ. ಯಾವಯಾವ ಕ್ಷೇತ್ರದಲ್ಲಿ ಅವರು ತಮ್ಮ ಪರಂಪರೆಯ ಸಾಂತತ್ಯವನ್ನುಉಳಿಸಿಕೊಂಡು ಬಂದಿದ್ದಾರೋ ಆಯಾ ಎಡೆಗಳಲ್ಲಿ ಅವರು ತಮ್ಮ ವೈಶಿಷ್ಟ್ಯವನ್ನೇ ಮೆರೆದು ನಾಡಿನ ಜ್ಞಾನಾನಂದಾಕರತೆಯನ್ನು ಹೆಚ್ಚಿಸಿದ್ದಾರೆ. ಮಿಕ್ಕೆಡೆಯಲ್ಲಿ ಸೊರಗಿದ್ದಾರೆ. ಗ್ರಾಮಸ್ಥರಂತೆ ಬರಿನೋಟದಲ್ಲೂ, ನೆರವಿಯಲ್ಲೂ ಒಂದೆರಡು ದಿನದ ಪೂಜೆ ಪುರಸ್ಕಾರ ಅನುಯಾತ್ರಾದಿಗಳಲ್ಲೂ ಮಹಾಯಾತ್ರಾ ಚಾಪಲ್ಯವನ್ನು ತೀರಿಸಿಕೊಳ್ಳದೆ ಅಂತಃಕರಣದ ಭೌತಧರ್ಮಾಯನ ಹಾಗೂ ಭಾವಧರ್ಮಾಯನದ ಹೆದ್ದಾರಿಯ ಯಾತ್ರಿಕರ ಜತೆಗೆ ಸೇರುವುದು ಆರ್ಷೇಯ ಪರಂಪರೆಯವರಾದ ನಮಗೆ ಉಚಿತ. ಈ ಬುದ್ಧಿಯೂ ಧೈರ್ಯವೂ ನಮಗೆ ಸರಾಗವಾಗಿ ಒದಗಿ ಬರುವಂತಾಗಲು ಮೌಲ್ಯನಿಧಿಗಳೂ ಸತತಾಧ್ಯವಸಾಯಶೀಲರೂ ಅಖಂಡ ಕಲಾವಗಾಹನ ದಕ್ಷರೂ ಅಜಿತರೂ ಅನಿರ್ಬದ್ಧರೂ ಆದ ನಮ್ಮ ಹಿಂದಿನ ಮಹಾಪುರುಷರ ಸಂತತ ಸ್ಮರಣೆ ಅವಶ್ಯಕ. ಈ ಪ್ರಜ್ಞೆ ಕಡಿದುಬಿದ್ದರೆ ಆ ಪುರುಷಸಿಂಹರ ಆತ್ಮಸತ್ವದ ಪೌಷ್ಟಿಕ ನಮಗೆ ದೊರೆಯದೆ ಹೋಗಿ ನಾವು ಸತ್ವ

ಗುಂದುತ್ತೇವೆ,ಪ್ರಾಪ್ತಿವಶಾನುಗರಾಗುತ್ತೇವೆ.ಇಂದಿನದರಲ್ಲಿ ಕೊಚ್ಚಿಹೋಗುತ್ತೇವೆ, ಪರೋಪಯೋಗಿಗಳಾಗಿ ಬಾಳುತ್ತಾ ಎರಡನೆಯ ದರ್ಜೆಯವರಾಗಿ ಬಿಡುತ್ತೇವೆ.ಹಿಮಾಲಯದ ಸಂಪರ್ಕವನ್ನುಸದಾ ಇಟ್ಟುಕೊಂಡಿರುವುದರಿಂದ ಗಂಗೆ ತನಗೆ ನಡುನಡುವೆ ಬಂದು ಸೇರಿಕೊಳ್ಳುವ ಮಾಲಿನ್ಯ ತನ್ನನ್ನುಕೆಡಿಸಲು ಬಿಡದೆ ಪವಿತ್ರವಾಗಿಯೇ ಸ್ವಗುಣಯುಕ್ತವಾಗಿಯೇ ಹರಿಯುತ್ತಿದ್ದು,ಗ್ರೀಷ್ಮದಲ್ಲೂ ಶೀತಲಜಲದ ಮಹಾಪೂರವನ್ನೇ ಪಡೆಯುತ್ತಿದೆ. ಹಾಗೆಯೇ, ನಮ್ಮ ಸ್ಮರಣೆಯಲ್ಲಿರುವ ನಮ್ಮ ಹಿಂದಿನ ಪುರಾಣಪುರುಷರ ಹಿರಿಮೆಯನ್ನೂ ಮಹಿಮೆಯನ್ನೂ ಮೌಲ್ಯಾಭಿಕಾಂಕ್ಷೆಯನ್ನೂ ನಮ್ಮ ಇಂದಿನ ಇರವಿನಲ್ಲಿ ನಾವು ಪ್ರಕಟಿಸುವಂತಾಗುವುದರಲ್ಲಿದೆ ಈ ಸ್ಮರಣೆಯ ಸಾರ್ಥಕ್ಯ. ನಾವು ಕೇವಲ 'ಪರಪ್ರತ್ಯಯನೇಯಬುದ್ಧಿ'ಗಳಾಗಬಾರದೆಂಬ ಎಚ್ಚರಿಕೆಯನ್ನು ಸಹ ಈಸ್ಮರಣೆ ಕೊಡುತ್ತಿರುತ್ತದೆ.ಈ ಸ್ಮರಣೆ ಈಗಿನ ಕಾಲದ ಮನಃಪ್ರವೃತ್ತಿಗಳಿಗೆ ತಕ್ಕಂತೆ ಆ ಉತ್ತಮಶ್ಲೋಕರ ಚರಿತ್ರೆಯ ಪುನಃಕಥನದಿಂದಲೂ ಪುನಃಕರಣದಿಂದಲೂ ಲಭ್ಯವಾಗುತ್ತದೆ.ಇದು ಕವಿ ಮತ್ತು ಕಲಾಭ್ಯಾಸಿಗಳ ಪರಿಶ್ರಮಕ್ಕೆ ಸೇರಿದ ವಿಷಯ. ಪ್ರಾಪ್ತಿ ಮತ್ತು ತನ್ಮಿತಿಗಳಿಗೆ ಆಧ್ಯಾತ್ಮಿಕ ಪ್ರತಿಭಟನೆ— ಇವುಗಳ ಸಹಯೋಗದಿಂದಲ್ಲವೆ ಪ್ರಗತಿ ?

ಈ ಕ್ಷೇತ್ರದಲ್ಲೂ ಕವಿಯನ್ನೂ ಕಲಾಭ್ಯಾಸಿಗಳನ್ನೂ ನುಂಗಲು ಅನೇಕ ಪರ್ಯಾಪ್ತಪ್ರಾಪ್ತಿಗಳು ಕಾದಿವೆ.ನಮ್ಮ ಭಾಷೆ ತುಂಬ ಹಳೆಯದು;ಅದನ್ನು ಪರಿಷ್ಕರಿಸಿ ಶ್ರೀಮಂತವಾಗಿ ಮಾಡಲು ಬಹುಜನ ಧೀಮಂತರು ಶ್ರಮಿಸಿದ್ದಾರೆ. ಅಕ್ಷರ-ಅಂಶ-ಮಾತ್ರಾ ವೃತ್ತಗಳು ಮಹಾಕವಿಗಳ ಅಧ್ಯವಸಾಯದಿಂದ ಪರ್ಯಾಪ್ತತೆಯ ಘಟ್ಟವನ್ನೇ ಮುಟ್ಟಿವೆ. ಹಾಗೆಯೇ ಶಬ್ದಗಳೂ ಅವುಗಳ ಅರ್ಥಗಳೂ—ಅವುಗಳ ಜೋಡಣೆಗಳೂ ಕೂಡ. ಈ ಬಂಧದಲ್ಲಿ ನಾನು 'ಆತ್ಮ' 'ಪ್ರಾಪ್ತಿ' 'ಭೌತಧರ್ಮಾಯನ' 'ಭಾವಧರ್ಮಾಯನ' 'ಅಖಂಡಕಾಲಾಸ್ವಾದ' 'ಅಂತಃಕರಣ' 'ವಿಕಸನ ಪ್ರಕ್ರಿಯೆ' ಮುಂತಾದ ಶಬ್ದಗಳಿಗೆ ವಿಶಿಷ್ಟಾರ್ಥಗಳನ್ನು ಕೊಡಲು ಹೆಣಗಿರುವುದು ಗೋಚರವಾದೀತು. ಅವು ಈ ಅರ್ಥಗಳನ್ನು ಸ್ವೀಕರಿಸುತ್ತವೋ ಇಲ್ಲವೋ ನಾನು ಖಚಿತವಾಗಿ ಹೇಳಲಾರೆ.ಅಂತೂ ಶಬ್ದ ಸಂಕೇತಗಳ ಹಿಡಿತ ನಮ್ಮಬುದ್ಧಿಯ ಮೇಲೆ ಅಪಾರ. ಅವುಗಳನ್ನೂ ಮತ್ತು ಅವುಗಳು ರೂಢಿಯಾಗಿ ಪ್ರವಹಿಸುವ ಛಂದಸ್ಸುಗಳನ್ನೂ ಸ್ವಾಧೀನಕ್ಕೆ ತಂದುಕೊಂಡು ಈ ಕಾಲದ ಮನಃಪರಿಸರಕ್ಕೆ ಒಗ್ಗಿಸಿಕೊಳ್ಳುವುದು ಕಷ್ಟ. ಹಾಗೆ ಒಗ್ಗಿಸಿಕೊಳ್ಳದೆ ನಮ್ಮ ಕಾವ್ಯಕಲೆಯೂ ಬೆಳೆಯದು.

ಪುನರಾವರ್ತನವನ್ನೇ ಕೋರುತ್ತವೆ. ಅವುಗಳ ವಿಷಯದಲ್ಲಿ ಸ್ವಲ್ಪ 'ಅಗೌರವ' ವನ್ನು (irreverence) ತೋರಿಸದೆ ನಮ್ಮ ಪ್ರಗತಿ ಸಾಗದು, ಅವುಗಳ ಮೇಲೆ ನಮ್ಮ ಪ್ರಭುತ್ವ ಏರ್ಪಡದು. ಆದರೆ, ಅವುಗಳ ಕಟ್ಟನ್ನೂ ಅರ್ಥವ್ಯಾಪ್ತಿಯ ಮಿತಿಯನ್ನೂ ನಾವು ಮುರಿಯಬೇಕೇ ಹೊರತು ಅವುಗಳಲ್ಲಿ ಅಡಗಿರುವ ನಮ್ಮ ಹಿರಿಯರ ಸೌಂದರ್ಯಕಾಂಕ್ಷೆಯ ಪರಿಶ್ರಮವನ್ನಲ್ಲ. ಮುಕ್ತಛಂದಸ್ಸಿನಲ್ಲೂ ಹೊಸಹೊಸ ಛಂದೋನಿರ್ಮಿತಿಗಳಲ್ಲೂ ಹಿಂದಿನ ಗತಿವಿಲಾಸಗಳನ್ನೂ ಲಯವಿನ್ಯಾಸವನ್ನೂ ನಾವು ಬಳಸಿಕೊಳ್ಳುವುದರಿಂದಲೂ ಶಬ್ದಗಳ ಹೊಸ ಜೋಡಣೆಯಲ್ಲಿ ಅವುಗಳ ರೂಢಿಯ ಅರ್ಥಗಳ ಕಟ್ಟನ್ನು ಸಡಲಿಸಿ ವಿಸ್ತರಿಸಿಕೊಳ್ಳುವುದರಿಂದಲೂ ನಾವು ನಮ್ಮ ಪರಂಪರೆಯ ಏಕಸೂತ್ರತೆಯನ್ನು ಕಾಪಾಡಿಕೊಳ್ಳಬಹುದು. ಹೀಗೆ ಮಾಡಿಕೊಂಡರೆ ಈ ಕ್ಷೇತ್ರದಲ್ಲೂ ನಮಗೆ ಕಲೆಗೆ ಅವಶ್ಯಕವಾಗಿ ಬೇಕಾಗುವ ನಿಡುಗಾಲದ ಪರಿಶ್ರಮ ಲಭ್ಯವಾಗಿ ನಮ್ಮ ಮಾತಿನ ಕಲೆ ಹುಲುಸುತ್ತದೆ. ಈ ದಿಸೆಯಲ್ಲಿ 'ಅಹಲ್ಯೆ'ಯಿಂದ ಮೊದಲುಗೊಂಡು ಈ 'ಸತ್ಯಾಯನ ಹರಿಶ್ಚಂದ್ರ'ದ ವರೆಗಿನ ನನ್ನ ಕಾವ್ಯಶ್ರಮ ಪ್ರವಹಿಸಿದೆ.

ಅಲ್ಲದೆ, ಆಧುನಿಕನ ಬಹು ಜಟಿಲವಾದ ಆತ್ಮಾನುಭೂತಿಗಳನ್ನು, ಅಲ್ಲಿ ಇಲ್ಲಿ—ಒಂದು ಪದ್ಯಖಂಡದಲ್ಲಿ, ಒಂದು ಗದ್ಯದ ತುಣುಕಿನಲ್ಲಿ, ಒಂದು ಚತುರವಾದ ಮಾತುಗಾರಿಕೆಯಲ್ಲಿ—ಸೋರಿಹೋಗಬಹುದಾದ ವಿಶಿಷ್ಟಾನುಭೂತಿಗಳನ್ನು ಕೂಡಿಡಲು ಅಖಂಡ ಕಾಲದ ಮಾನವಾನುಭೂತಿಗಳನ್ನು ಪಡೆದಿರುವ, ಮತ್ತು ಆದ್ಯಕಾಲದಲ್ಲಿ ಮೃಗ್ಯವಾದ, ವಿಶ್ವಾಮಿತ್ರ—ಹರಿಶ್ಚಂದ್ರ—ಚಂದ್ರಮತಿಯರಂಥ ಪಾತ್ರಗಳು ನಮಗೆ ದೈವದತ್ತವಾದ ಅಕ್ಷಯ ನಿಧಿಗಳು. ಈ ನಿಧಿಗಳ ಜ್ಞಾನಾನಂದಾಕರತೆ ಅಪಾರ, ಇವರನ್ನು ವಿಕಾರಗೊಳಿಸದೆಯೇ ಆಧುನಿಕಪ್ರಜ್ಞೆಯನ್ನು ಇವರಲ್ಲಿ ಹುದುಗಿಸಲು ಅವಕಾಶ ಬಹಳುಂಟು. ಅಖಂಡಕಾಲ ಪಿಪಾಸುವಾದ ಆತ್ಮದ ಮೌಲ್ಯತೃಷೆಯನ್ನು ಎಲ್ಲ ಕಾಲದಲ್ಲೂ ತಣಿಸಬಲ್ಲಂಥವರಿವರು. ಈ ನಾಟಕದಲ್ಲಿ ಬರುವ ಚಿಂತರಗಳೂ ಬಹಳ ಹಳೆಗಾಲದವು. ಆದರೆ ಆಧುನಿಕ ಮನಸ್ಸನ್ನು ಮುತ್ತುವ ಅನೇಕ ವಿಕಾರ ಪ್ರೇರಣೆಗಳ ಪ್ರತೀಕಗಳಾಗಿವೆ. "ಅಹಾಹಾ ಮುಸುರುತಿವೆ ಮುತ್ತುತಿವೆ" (ಪುಟ ೪೫–೪೬) ಮುಂತಾದ ಉದ್ಗಾರಗಳಲ್ಲೂ ಅವುಗಳ ಕುಣಿತದ ಹಾಡಿನಲ್ಲೂ ಇದು ಅಭಿವ್ಯಕ್ತವಾಗುತ್ತದೆ. ಹಾಗೆಯೇ ಸ್ಮಶಾನ ರುದ್ರೋಪಾಸಿಗಳೂ ಬಹಳ ಹಳಬರು; ನಮ್ಮೂರಿನ ಸ್ಮಶಾನದಲ್ಲಿ ನಾನು ಸಣ್ಣ ಎಳತನದಲ್ಲಿ ಕಂಡ ವಿಕೃತ ವೇಷದ ಭಯಂಕರ ರೂಪದ ಆದರೆ ಶುಭ ಪ್ರದಾನ ಪ್ರಲೋಭನದಿಂದ ಬಹು ಮಂದಿ ಸರಳರನ್ನು

ತಮ್ಮತ್ತ ಸೆಳೆಯುವ ಬೈರಾಗಿಗಳ ಒಂದೆರಡು ಎಸಳುಗಳು ಇವರಲ್ಲಿ ಮಾರ್ಪೊಳೆಯುತ್ತವೆ—ಇಂದೂ ಇವರು ಕಾಣಲು ಸಿಕ್ಕಬಹುದು. ವಿಕೃತ ಕಲ್ಪಗಳಿಂದಲೇ ಮಾನವ ವಿಕಾರಗಳನ್ನೆಲ್ಲ ಋಜುಗೈಯಲು ಹೊರಡುವ ಶುಭ ಮೋಹಿತರಿವರು. ಆಗಂತುಕ ಶುಭಾಶುಭಗಳನ್ನು ಅಲಕ್ಷಿಸಿದಲ್ಲದೆ ಮಾನವನಿಗೆ ತನ್ನ ಮೌಲ್ಯಾಭಿಕಾಂಕ್ಷೆ ಫಲಿಸದು ಎಂಬುದನ್ನು ನಮ್ಮಂತೆ ಇವರೂ ಅರಿಯರು. ಅಷ್ಟಕ್ಕೂ, ಕವಿಯ ಗುರಿ ಕಲೆಯ ಮಾಧ್ಯಮದಲ್ಲಿ ಆತ್ಮಾಭಿವ್ಯಂಜನೆಯೇ ಹೊರತು ಕೇವಲ ಅಭ್ಯಸ್ತ ಕಲೆ ಮತ್ತು ವ್ಯುತ್ಪತ್ತಿಯ ಪ್ರದರ್ಶನವಲ್ಲ. ನಮ್ಮ ಹಳೆಕಥೆಗಳ ಪ್ರಸಿದ್ಧ ಪಾತ್ರಗಳು ನವೀಕೃತವಾಗಿ ಭೋಗ್ಯವೆನಿಸುವುದೂ ಸಹ, ಆ ಕೃತಿಯಲ್ಲಲ್ಲದೆ ಬೇರೆಡೆ ಎಲ್ಲಿಯೂ ಸಿಕ್ಕದ ವಿಶಿಷ್ಟ ಮಾನವಾನುಭೂತಿಯ ರಸದ ಸೇಚನೆಯಿಂದಲೇ; ಅವು ಜಡವಾಗುವುದೂ ಆ ರಸದ ರಾಹಿತ್ಯದಿಂದಲೇ. ಪದ್ಯಗಳ ಹಾಗೂ ಕವನ ಪಂಕ್ತಿಗಳಲ್ಲಿ ನಾನೇನಾದರೂ ಎಚ್ಚರಿಕೆಯಿಂದ ಅವುಗಳ ಅಚ್ಚುಕಟ್ಟಿಗೆ ವಿಶೇಷ ಗಮನಕೊಟ್ಟದ್ದರೆ 'ಸಿಪ್ಪೆಯೊಪ್ಪಗೆಟ್ಟಾಗ ಹಣ್ಣಿನ ರಸ ಕೊಳಕಾಯಿತ್ತು' ಎಂಬ ಶರಣ ವಚನವನ್ನು ನೆನಪಿನಲ್ಲಿಟ್ಟುಕೊಂಡೇ ಹೊರತು ನನ್ನ ಕಲಾ ಕೌಶಲ ಪ್ರದರ್ಶನಕ್ಕಲ್ಲ. ನನ್ನ ನವ ಸಂವಿಧಾನ ಮತ್ತು ರಚನಾ ತಂತ್ರಗಳಿಂದ ಶ್ರುತಿ ಮತ್ತು ಆದಿ ಕಾವ್ಯದಿಂದ ಹೊರಟು ಪುರಾಣಗಳ ನಡುವಣಿಂದ ಆಧ್ಯಕಾಲಕ್ಕೆ ಬರುತ್ತಿರುವ ಈ ಹಳಗತೆ ತನ್ನೀ ಸ್ವರೂಪದಲ್ಲೂ ಪರಂಪರೆಯ ಏಕ ಸೂತ್ರತೆಯಲ್ಲಿ ಭಂಗವಡೆಯದೆ ಸರ್ವಾತ್ಮರಸೋದಯವನ್ನು ತರಲಿ ಎಂಬುದೇ ನನ್ನೀ ಪ್ರಯತ್ನದ ಹಾರೈಕೆ.

ಈ ನಾಟಕವನ್ನು ರಂಗದಲ್ಲಿ ನೋಡಬೇಕೆಂಬ ಆಸೆ ನನಗುಂಟು. ಪ್ರಾಯಶಃ ಇದು ನೆರವೇರಿದರೂ ನೆರವೇರೀತು. ಇದರ ಸಂಗೀತ ಹೊಸ ವಾದ್ಯಗಳನ್ನೂ ಹೊಸ ರಾಗರಚನೆಗಳನ್ನೂ ಲಯಗಳನ್ನೂ, ಭಾರತೀಯ ಸ್ವರ–ಲಯ ಪದ್ಧತಿಯಲ್ಲಿಯೇ, ಬೇಡುತ್ತವೆ. ವೇಷಗಳಿಗೂ ಭೂಷಣಗಳಿಗೂ ರೂಢಿಯ ಯಕ್ಷಗಾನದ ಹೊಸ ಜೋಡಿಕೆ ಅವಶ್ಯಕ. ಅಭಿನಯದ ಪರಿಪಾಟಿಯೂ ಶಾಸ್ತ್ರೀಯ ಆಂಗಿಕಾಭಿನಯಗಳ ನವವಿನ್ಯಾಸ ಬೇಕೆನಿಸುವಂಥದು. ಆದರೆ ಇವುಗಳ ವಿವರ ನನಗೆ ವಿಶದವಾಗಿ ಹೊಳೆದಿಲ್ಲ. ಅವು ತಜ್ಞ ಕಲಾವಿದರ ಸ್ವತ್ತು. ಆದುದರಿಂದ ಈ ಚಾಕ್ಷುಷ–ಕ್ರತುವಿನ ಕಾಲುಭಾಗದ ಹೊಣೆ ಮಾತ್ರ ನನ್ನದು, ಮುಕ್ಕಾಲು ಪಾಲು ಇತರ ಕಲಾವಿದರದು; ಈ ಅಂಶ ಅವರು ಈ ನಾಟಕದಲ್ಲಿ ಕುತೂಹಲಗೊಳ್ಳುವಂತೆ ಮಾಡಬಹುದು. ಈ ಕೃತಿಯನ್ನು ಒಂದು ನವೀನ ಯಕ್ಷಗಾನದಂತೆ ಆಡಬಹುದೆಂದು ನನ್ನ

ನಿರೀಕ್ಷೆ. ಪಾತ್ರಗಳು ನರ್ತನದಿಂದಲೇ ಪ್ರವೇಶಿಸಿ, ಮಾತನ್ನೂ ಹಾಡನ್ನೂ
ಎದ್ದು ಕಾಣುವ ಆಂಗಿಕಾಭಿನಯಗಳಿಂದಲೇ ಅಭಿನಯಿಸಬೇಕೆಂಬುದು ನನ್ನ
ಆಶಯ. ಈ ನಾಟಕವನ್ನು ನಾನು 'ಯಕ್ಷರೂಪಕ' ವೆಂದು ಕರೆದಿರುವುದು
ಈ ಉದ್ದೇಶದಿಂದಲೇ. ನನ್ನ 'ಹರಿಣಾಭಿಸರಣ'ವನ್ನು ಶ್ರೀಮತಿ ವಸು
ಮತಿಯವರ ನೇತೃತ್ವದಲ್ಲಿ ಕುಮಾರಿಯರಾದ ನಂದಿನಿ, ರೇಖಾ ಮತ್ತು
ಗೆಳತಿಯರು ಬಹು ಮನೋಹರವಾಗಿ ಯಾವ ಕುಂದೂ ಇಲ್ಲದಂತೆ, ಇದು
ಇದ್ದರೆ ಹೀಗಿರಬೇಕು ಎನ್ನಿಸಿ, ಅಭಿನಯಿಸಿದುದನ್ನು ನೆನೆದಾಗಲೆಲ್ಲ ಇಂಥ
ನಾಟಕಗಳ ಪ್ರದರ್ಶನ ನಮ್ಮ ಕಲಾಪರಿಣತರು ಏಕೀಭವಿಸಿ ಮನಸ್ಸು
ಮಾಡಿದರೆ ಅಸಾಧ್ಯವಲ್ಲ ಎನಿಸುತ್ತದೆ. ಪ್ರಾಯಶಃ ಈ ನಾಟಕದ ವಿಷಯ
ದಲ್ಲೂ ಆ ನೇತ್ರ-ಶ್ರೋತ್ರ ಸುಖ ನನಗೆ ಮರುಕೊಳಿಸೀತು. ಹಾರೈಕೆ
ಗಳನ್ನೆಲ್ಲ ತೀರಿ ಹೋಗಲು ಬಿಡುವುದು ಮರುಳುತನ.

ಈ ಕಾವ್ಯವನ್ನು ಮುಂದುವರಿಸಲು ತೊಡಗಿದಾಗಿನಿಂದ ಅದ್ಯಕ್ಷಣದ
ವರೆಗೆ, ಪ್ರತಿಮಾಡುವುದು ಮೊದಲು ಕರಡಚ್ಚನ್ನು ಕೊನೆಯ ಘಟ್ಟಕ್ಕೆ
ಮುಟ್ಟಿಸುವವರೆಗೆ, ನನ್ನ ತರುಣಮಿತ್ರ 'ಸುಜನಾ' ಅವರ ನೆರವು ನನಗೆ ದೊರೆ
ತಿದೆ. ಅದನ್ನೆಲ್ಲ ಪಟ್ಟಿಮಾಡಿದರೆ ಅವರಿಗೆ ಅಪಚಾರವಾಗುತ್ತದೆ, ನಾನು
ಹೇಳುವುದು ಬರಿಯ ಉಪಚಾರವಾಗುತ್ತದೆ. ಒಂದನ್ನಂತೂ ಬಹುಸಂತೋಷ
ದಿಂದ ಹೇಳುತ್ತೇನೆ : ಅವರ ಪ್ರಶ್ನೆಚಿಹ್ನೆಗಳಿಂದ ನಾನು ಬಹು ಉಪಕೃತ
ನಾಗಿದ್ದೇನೆ. ಅವು ನನಗೆ ಎಚ್ಚರಿಕೆ ಕೊಡದಿದ್ದರೆ ಈ ನಾಟಕದಲ್ಲಿ ಹಲ
ವೆಡೆಗಳಲ್ಲಿ ಭಾವವೈಶದ್ಯಕ್ಕೆ ಲೋಪಬರುತ್ತಿತ್ತು. ತಮ್ಮ ಭಾವುಕತೆಯಿಂದ
ಈ ರೂಪಕದ ಬರವಣಿಗೆ ನನಗೆ ಹರ್ಷಕೊಡುವಂತೆ ಮಾಡಿದವರು 'ಸುಜನಾ'
ಅವರು ಎನ್ನಬೇಕು. ಪ್ರಿಯಮಿತ್ರ ದೊ. ಲ. ನ. ಅವರು ಇದನ್ನು ಆಮೂ
ಲಾಗ್ರವಾಗಿ ಓದಿ, ಚರ್ಚಿಸಿ, ಮೆಚ್ಚುನುಡಿಯಾಡಿ, ನನಗೆ ಬಹು ಸಂತೋಷ
ವನ್ನು ಕೊಟ್ಟಿದ್ದಾರೆ. ಅವರು ಅಲ್ಲಲ್ಲಿ ಎಳೆದ ಅಡ್ಡಗೆರೆಗಳು ನಾನು ಈ
ನಾಟಕದ ಓರೆಕೋರೆಗಳನ್ನು ತಿದ್ದಲೂ, ಅವರೊಡನೆ ಮಾಡಿದ ಜಿಜ್ಞಾಸೆ
ಕೊರತೆಗಳನ್ನು ಪೂರ್ಣಮಾಡಲೂ ಸಹಾಯಕವಾಗಿವೆ. ಉಪನಿಷತ್ತಿನ
ಭಾಷೆಯಲ್ಲಿ ಹೇಳಬಹುದಾದರೆ. 'ಕಾವ್ಯಸಂಧಿ'ಗೆ ಕವಿ 'ಪೂರ್ವರೂಪ',
ಸಹೃದಯ ಅದರ 'ಉತ್ತರರೂಪ'. ಈ ಸಂದರ್ಭದಲ್ಲಿ ಈ 'ಉತ್ತರ
ರೂಪ'ವನ್ನು ಒದಗಿಸಿಕೊಟ್ಟವರು ಈ ತರುಣ, ಈ ಹಿರಿಯ, ಮಿತ್ರರು.
ಸಹೃದಯರೂ ವ್ಯುತ್ಪನ್ನರೂ ಆದ ತರುಣರಿಗೂ ಹಿರಿಯರಿಗೂ ಈ ನಾಟಕ
ಹಿಡಿಸಬಹುದೆಂಬ ಭಾವನೆ ನನಗೆ ಮನದಟ್ಟಾಗಿ ಇದರ ಪ್ರಕಟಣೆಗೆ

ಉತ್ಸಾಹ ತಳೆದುದು ಇವರಿಂದ. ಶ್ರೀಮಾನ್ ಪ್ರೊ. ಎಚ್. ಎಂ. ಶಂಕರ ನಾರಾಯಣರಾಯರು ತಮ್ಮ 'ಶಾರದಾ ಮಂದಿರ'ದ 'ಕವಿ-ಕಾವ್ಯಮಾಲೆ'ಯ ಬೆಳ್ಳಿ ಹಬ್ಬದೊಸಗೆಯ ಸೂಚಕವಾಗಿ ಈ ಗ್ರಂಥವನ್ನು ತುಂಬ ಅಭಿಮಾನ ದಿಂದ ಪ್ರಕಟಿಸುತ್ತಿದ್ದಾರೆ. ಪುಸ್ತಕದ ಅಚ್ಚುಕಟ್ಟು ಈ ಹಬ್ಬಕ್ಕೆ ತಕ್ಕಂತೆ ಬಹು ಪರಿಷ್ಕಾರವಾಗಿದೆ. ಇದಕ್ಕಾಗಿ ನಾನು ಈ ಪ್ರಕಾಶಕಮಿತ್ರರಿಗೆ ತುಂಬ ಋಣಿ. ಅವರ 'ಶಾರದಾಮಂದಿರ' ಶ್ರೀಕೀರ್ತಿಗಳಿಂದ ಇತೋಪ್ಯತಿ ಶಯವಾಗಿ ಶೋಭಿಸಲಿ, ಮತ್ತು ವರ್ಧಿಸಲಿ ಎಂದು ಹಾರೈಸುತ್ತೇನೆ.

ಶ್ರೀ ವೆಸ್ಲಿ ಪ್ರೆಸ್ಸಿನವರು ತಮ್ಮ ಬಿಡುವಿಲ್ಲದ ಕಾರ್ಯಕ್ರಮದಲ್ಲೂ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಬಹುಬೇಗ ಬಹು ಅಂದವಾಗಿ ಈ ಪುಸ್ತಕವನ್ನು ಮುದ್ರಿಸಿಕೊಟ್ಟಿದ್ದಾರೆ. ಅವರಿಗೆ ನಾನು ತುಂಬ ಕೃತಜ್ಞ; ಅವರದು ಸ್ಮರಣೀಯವಾದ ಉಪಕಾರ.

ನನ್ನ ಹೃದಯದಲ್ಲಿ ಈ 'ಯಕ್ಷರೂಪಕ'ವನ್ನು ಇದುವರೆಗೆ ಹಿಂಗ ದಂತೆ ಕಾಪಿಟ್ಟು ಎಡರುತೊಡರುಗಳನ್ನೆಲ್ಲ ಕಡೆಹಾಯಿಸಿದ ವಾಗಧಿದೈವ ಇದನ್ನು ಸಹೃದಯರ ಹೃದಯದಲ್ಲಿ ಸದಾ ಭಾವಸ್ಯಂದಿಯಾಗಿರುವಂತೆ ಕಾಪಿಡುತ್ತಿರಲಿ.

ಮಾನಸಗಂಗೋತ್ರಿ ಪು. ತಿ. ನ.
29-2-68

## ಎರಡನೆಯ ಮುದ್ರಣದ ಮುನ್ನುಡಿ

ಎರಡು ವರ್ಷಗಳ ಹಿಂದೆ ಪ್ರಕಟವಾದ ಈ ಕೃತಿ ಈಗ ಎರಡನೆಯ ಆವೃತ್ತಿಯನ್ನು ಕಾಣುತ್ತಿದೆ. ಈ ಸುಯೋಗ ಇದಕ್ಕೆ ಲಭಿಸಿರುವುದು ಮೈಸೂರು ವಿಶ್ವವಿದ್ಯಾನಿಲಯದವರ ಕೃಪೆಯಿಂದ. ಅವರು ಇದನ್ನು ಮೊದಲನೆಯ ಬಿ.ಎ., ಬಿ.ಎಸ್‌ಸಿ. ತರಗತಿಗಳಿಗೆ ಪಠ್ಯಪುಸ್ತಕವಾಗಿ ಆರಿಸಿ ಪುರಸ್ಕರಿಸಿದ್ದಾರೆ. ಅವರ ಈ ಅಭಿಮಾನಕ್ಕೆ ನಾನು ಬಹು ಕೃತಜ್ಞನಾಗಿದ್ದೇನೆ.

ಮೈಸೂರು
4-6-1970

ಪು. ತಿ. ನರಸಿಂಹಾಚಾರ್

## ಮೂರನೆಯ ಮುದ್ರಣದ ಮುನ್ನುಡಿ

ಬೆಂಗಳೂರು ವಿಶ್ವವಿದ್ಯಾನಿಲಯದ ೧೯೭೪ನೆಯ ವರುಷದ ಬಿ.ಕಾಂ. ಪರೀಕ್ಷೆಗೆ ಈ ನಾಟಕವನ್ನು ಪಠ್ಯಪುಸ್ತಕವನ್ನಾಗಿ ಗೊತ್ತುಪಡಿಸಿದ ಕಾರಣ ಈ ಮೂರನೆಯ ಮುದ್ರಣಕ್ಕೆ ಅವಕಾಶ ದೊರಕಿದೆ. ಈ ಸೌಭಾಗ್ಯವನ್ನು ಒದಗಿಸಿದ ವಿಶ್ವವಿದ್ಯಾನಿಲಯಕ್ಕೂ, ಅದರ ಪಠ್ಯಪುಸ್ತಕ ನಿಯಾಮಕ ಸಮಿತಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಅತ್ಯಲ್ಪ ಕಾಲದಲ್ಲಿ ನಾಟಕವನ್ನು ಮುದ್ದಾಗಿ ದಕ್ಷತೆಯಿಂದ ಮುದ್ರಿಸಿಕೊಟ್ಟ ಶ್ರೀ ಸದ್ಗುರು ಮುದ್ರಣಾಲಯದವರಿಗೆ ನನ್ನ ಹಾರ್ದಿಕ ವಂದನೆಗಳು ಸಲ್ಲುತ್ತವೆ.

ಮೈಸೂರು
14-6-74

ಪು. ತಿ. ನರಸಿಂಹಾಚಾರ್

ಪ್ರಿಯಮಿತ್ರ

ರೊ. ಲ. ನರಸಿಂಹಯ್ಯ ಅವರಿಗೆ

ನಿಷ್ಠೆಯ ಜತೆಗೆಯೆ ಪ್ರೇಮ ಕೋಮಲತೆ
ಕರಣತ್ರಯಶುಚಿತೆ
ತಥ್ಯದ ನಿಷ್ಠುರ ಚಿಂತನೆಯೊಂದಿಗೆ
ಬೆರೆತಿದೆ ರಸರುಚಿತೆ
ವಿಶ್ವಸನೀಯರಿಗತಿಮೃದುಹೃದಯನೆ
ವಿದ್ಯಾವಿಶದ ಮುಖ
ನಿನಗಂಕಿತ ಸತ್ಕಾಯನ ಸೂಸಲಿ
ಸತ್ಯಸ್ನಿಗ್ಧ ಸುಖ

## ಪಾತ್ರಗಳು

ವಿಶ್ವಾಮಿತ್ರ
ಹರಿಶ್ಚಂದ್ರ
ಚಂದ್ರಮತಿ
ರುದ್ರೋಪಾಸಿಗಳು
ಉಪಾಸಿಪ್ರಧಾನ
ಬೇತರಗಳು
ಬೇತರ ದೊರೆ
ಕೋಡಂಗಿ
ಮಸಣಿಗ

(ವಸಿಷ್ಠ, ವೀರಬಾಹು, ವಿಪ್ರ, ಊರದೊರೆ, ನಾರದಾದಿ ದೇವರ್ಷಿ ದೇವವೃಂದ)

ಸ್ಥಳ: ಕಾಶೀನಗರದ ಶ್ಮಶಾನ
ಮತ್ತು ಅದರಲ್ಲಿನ
ಹರಿಶ್ಚಂದ್ರನ ಹಟ್ಟಿ

ಕಾಲ: ಒಂದು ರಾತ್ರಿ

ಶ್ರೀರಸ್ತು

ಸತ್ಯಾಯನ

# ಹರಿಶ್ಚಂದ್ರ

## ನಾಂದಿಶ್ಲೋಕ

ಭೂಭೋಗ ಭುವದ ಸೊಗ ಸುವರ್ಲೋಕದ ಹರ್ಷ
ತ್ರೈವಗುಣ ವತೌಲ್ಯಾವಲಂಬಿಯೆನಲರಿತು
ಕೇಡುಗಳ ಕಾಪ್ಪೊಳಿತ ಕ್ಷೇಮನಿಧಿಯನು ತುಡುಕಿ
ಇಹಕೆ ಬೆಲೆಗಳ ತರುವ ಮಹಿಮರನು ಕುರಿತು
ಮನ ಮಾತುಗೊಳ್ಳುತಿರೆ ಪಾತ್ರ ವೇಷವ ಧರಿಸೆ
ಸಾಕ್ಷಿಯಂದದಿ ಜನತೆ ವೀಕ್ಷಿಸಲು ನೆರೆಯೆ
ಚಾಕ್ಷುಷಕ್ರತುವಿದನು ಹದುಳದೊಳು ನಡೆಸೆಂದು
ವಾಕ್ಪತಿಗೆ ನುತಿಯೊರೆವೆವೆಡರುಗಳು ಹರಿಯೆ.

('ಕೋಡಂಗಿ' ಎಂಬ ದೇವದೂತ ತಕ್ಕ ವೇಷದಲ್ಲಿ ಪ್ರವೇಶಿಸುತ್ತಾನೆ)

### ಕೋಡಂಗಿ

(ದೇವಲೋಕದ ಹಾಸ್ಯಗಾರ)

ದಿವದಿಂದಿಳಿದೆನು ನಾ ಕೋಡಂಗಿ
ದೇವರೆ ತೊಡಿಸಿದರೆನಗೀ ಅಂಗಿ
ಕೊಕ್ಕಿನ ಕುಲಾವಿ ಸೊಕ್ಕಿನ ಬರಲು
ಮನಮನವ ಬಡಿದು ಕಸವ ಗುಡಿಸಲು
ಛಟಛಟೆ ಸೊಯತ್‌ಸೊಯತ್ ಗುನ್ನರೆ ಗುಂಗುಂ
ಭೂರಂಗವಿದಾಗಲಿ ಶಿವರಂಗಂ
ಹಸಗ್ಗೈಯಲಿ ಕಣ್‌ಕಿವಿಯು ಮೃದಂಗಂ
ಆಗಲಿ ಭವಭಂಗಂ ರಸಸಂಗಂ
ಅಂತಶ್ಶಿವ ಬಿಜಗ್ಗೈಯಲಿ ಹೊರಗೆ
ಸಾಕ್ಷಿಯಕ್ಷಿಯಿಂದಾಟವ ಬೆಳಗೆ

ಆತನೊಪ್ಪಿತಕೆ ಯಕ್ಷರೂಪಕ
ಸರ್ವಶುದ್ಧಿಕರ ಮೌಲ್ಯೋದ್ಬೋಧಕ
ಜರಗುವುದೈ—ಕಾಂಬುದು ಸುಡುಗಾಡು
ತನ್ನ ಬೆಲೆಯುಳಿಸಲರಸನ ಪಾಡು.

ಹಳಕತೆಯೆನ್ನುತ ಬೇಸರಿಸದಿರಿ
ಈ ಜಗದೊಳು ಹೊಸತಾವುದು ಪೇಳಿರಿ
ಜೋಡಣೆ ಹೊರತು ? ಅದೆ ಕಲೆಯೈಸಿರಿ
ಪಾತ್ರಗಳೈತಹವಿಲ್ಲಿಗೆ ಪರಿಪರಿ
ಮಸಣದ ರುದ್ರೋಪಾಸಿಗಳೊಕ್ಕಡೆ
ಭೀಕರ ಬೆಂತರಗಳ ಪಡೆಯೊಕ್ಕಡೆ
ನವವೇಷ ನವನರ್ತನ ಗಾನ
ವಿಕೃತಿಗು ಕಲೆಯೊಳಗಣ ಸನ್ಮಾನ
ಶೃಂಗಾರದ ತುಸತುಣಕೂ ಇಲ್ಲ
ಜಾನಕೆ ಶರಣಾದವು ರಸವೆಲ್ಲ
ಸೂನೃತಾತ್ಮ ಗಾಂಭೀರ್ಯವೆ ಬೀರ
ಮೌಲ್ಯೋದಯವೇ ದೃಶ್ಯದ ಸಾರ

ಹಿಂದಾದುದ ನೆನೆಗಣ್ಣಿಂ ನೋಡಿ—
ಹರನೈತರುವನು ಮುನಿಗಳ ಕೂಡಿ
ಇಂದ್ರನೋಲಗಕೆ ಸುವಿಲಾಸದೊಳು
ವಿಶ್ವಾನುಗ್ರಹ ಪರ್ಯಟನದೊಳು
ಪೊರೆಯೇರುತ ಮಣಿವುದು ಸಭೆ ಭವಗೆ
ಹೊಸ ಬಗೆಯನು ಮೆರೆಯಿಸಿತದು ಶಿವಗೆ
'ದಿಟ, ದಿವ್ಯರ ಸಭೆ,' ಎಂಬನು ಮನದಿ
'ಇದಕ್ಕೈತಹರಿಹರೇ ಆ ನೆಲದಿ ?'
ಎನುವನು ಮುನಿಬೃಂದವ ನಿರುಕಿಸುತ
ದಿಟ್ಟಿಯೊಳಾ ಕೌಶಿಕನನೆ ಕುರಿಯುತ.
ತನ್ನ ಧೃತಿಮತಿಯೆ ಮನದೊಳು ತುಂಬಿರೆ

ವಸಿಷ್ಠ ಬ್ರಹ್ಮರ್ಷಿಗೊ ಬೇರೆ ಬಗೆ
ಹರಿಶ್ಚಂದ್ರನಂ ಹರಗೆ ತೋರುವಂ
'ನನ್ನಿಗನಿವ ಧರ್ಮಿಷ್ಠಂ ಬರುವಂ
ರಾಜಸೂಯವನು ಗೈದೀ ಸಭೆಗೆ'
ಎನೆ ಮುನಿ ಪಕ್ಕಾದನು ಬಿರುನುಡಿಗೆ
'ಆ ಭವಿ ಸುತಕಾಮಿ ಸಾಮಾನ್ಯಂ
ಹುಸಿಕಂ ಸುಧರ್ಮಿಗಪ್ಪನೆ ಮಾನ್ಯಂ ?'
ಎನೆ ಗಾಧೇಯಂ, ವಸಿಷ್ಠನೆನುವಂ :
'ಮರುಕಕೆ ಈಡಾದವನ ಸತ್ವವ
ಅರಿವನೆ ಆತನನುಪಕರಿಸಿದವ ?'
ಹರ ನಗುವನು ಕೌಶಿಕನಂ ನೋಡಿ
ಅವರೊಳು ಹುರುಡೆಬ್ಬಿಸುವುದೆ ರೂಢಿ.
ಮರುಕದೊಳೂನಂ ಸತ್ತ್ವಗ್ರಾಹಿತೆ
ಎಂಬ ಹುರುಳುನುಡಿ ಕೆಡಿಸಿತು ಸಮತೆ
ವಿಶ್ವಾಮಿತ್ರಗೆ ಬಿರುನುಡಿವನವಂ
'ಶಮವಿಲ್ಲದ ದಮವಿಲ್ಲದ ತಪವಂ
ಮೂಸದ ರಾಗಿಯುವಂ ಭೋಗಿಯುವಂ
ಎಂತಡರುವನೀ ದಿವ್ಯಸ್ಥಲವಂ
ತ್ಯಾಗದಿ ವೈರಾಗ್ಯದಿ ಸುಸ್ಥೈರ್ಯದಿ
ದೈವವ ಮೆಚ್ಚಿಸದೆಯೆ ಕಡುಧೈರ್ಯದಿ ?'
ಎನೆ ಬಿಂಕದೊಳೀ ತೆರ ಕೌಶಿಕ ಮುನಿ,
'ಅದರೊಳೆ ತೊಡಗಿಹನಿಕೊ ಕೊಡುಗೈ ದಣಿ'
ಎನ್ನುತ ಯಾಗಾಂತ್ಯದಿ ದಾನದೊಳಿಹ
ದೊರೆಯ ತೋರುವಂ ವಸಿಷ್ಠನಹಹ !
'ಬರಿ ಎದುರಾಡುವ ರೂಢಿಗೆ ನುಡಿವೆಯೋ
ಪರಿಕಿಸುವೆನು, ಋಷಿ, ದಿಟವಾಡುವೆಯೋ ?'
ಎನೆ ಕೌಶಿಕ, ಹರನೊಪ್ಪಿದ ಜತನಕೆ
'ಸ್ವರ್ಗವಗ್ಗವೇ ವಸಿಷ್ಠವಚನಕೆ ?'
ಎನ್ನುತ ನಗೆಯಾಡುತ ಇಂದ್ರನ ಜತೆ ;
ಅಲ್ಲಿಂ ಮೊದಲಿಟ್ಟಿತು ಹುರುಡಿನ ಕತೆ.

ಯಜ್ಞದವಸರದೊಳವತರಿಸಿದ ಮುನಿ
ಆತಗೆ ಋಣಿಯಾದನು ಕೊಡುಗೈ ದಣಿ
ಎಲ್ಲವನೂ ಕೊಂಡನು ದಕ್ಷಿಣಗೆ
ಗಾಧೇಯ ; ಸತಿಸುತರನು ಕೊನೆಗೆ
ತನ್ನನೆ ಮಾರುತ ಚಂಡಾಲನಿಗೆ
ದೊರೆ ಬಂದಿಹನೀ ರುದ್ರಭೂಮಿಗೆ.
ಕೌಶಿಕಮುನಿ ಈಡಾದನು ಚಿಂತೆಗೆ
ತನ್ನೊಳೆ ನುಡಿದಾಡುವನೀ ಪರಿಗೆ :

"ನನ್ನ ನೆಲೆಯೆಲ್ಲೀಗ ?—ದೇವರೆಡೆಯಲ್ಲ
ಹಿಮಗಿರಿಯುಮಾಪತಿಯ ಸನ್ನಿಧಿಯೊಳಲ್ಲ
ಹೋಮಧೂಮದ ಜತೆಗೆ ಶಿಷ್ಯರುದ್ಗೀಥ
ಸೃಜಿಪ ನವನಾಕದೊಳಗೆನ್ನ ಚಿತ್ತರಥ
ಚರಿಸದೀ ಮಸಣದೆಡೆ ನಡೆಯಗೆಟ್ಟಿತಲ
ಋಷಿಯೊಡನೆ ಘಟಿಸಿತೇ ನನಗೆ ಬರಿಯ ಛಲ ?
ನನ್ನಿಗಿವ ನಿಲಲೇನು ನಿಲ್ಲದಿರಲೇನು
ಆವ ಬೆಲೆಗೆನೆ ದೊರೆಯ ಕಾಡುತಿಹೆ ನಾನು ?
ತೆರುವುದೆಲ್ಲವ ತೆತ್ತು ಕೊಟ್ಟಮಾತುಳಿಸಿ
ನಿಂತನೀ ದೊರೆ ಹೊಲೆಯನಾಳುತನ ವರಿಸಿ
ನನ್ನೇರುವೆಯ ನೆಲೆಗೆ ಏರುತಿಹನಲ ರಾಜ
ತೊರೆತೊರೆಯುತಳಲುಂಡೆ ಬೆಳೆಯುತಿದೆ ಋಷಿತೇಜ !
ದಿಟಕು ಬೈರಾಗಿಯೇ, ಆಸೆಕಿಲುಬಿಲ್ಲವೇ
ಅಳುಕು ಎಳಸಿಕೆ ಇವನ ಛಲದಿದಿರು ನಿಲ್ಲವೇ ?
ಮನುಜಮಿತಿಯರಿವೆನ್ನ ದೃಷ್ಟಿಯಾಯಿತೆ ಮಲಿನ ?
ಪರಿಕಿಸುವೆನೆಂತಿವನ ನನ್ನ ಕೈ ತಪ್ಪಿಹನ ?
ಆ ದಣಿಗೆ ಹುಸಿಯುಲಿವ ಏಗೆಯ್ವೆನೀಗ ?"
ಎಂಬನು—ಹವಣೊಂದನು ಕಾಂಬನು.—
ಅಗೊ ಅಗೊ—ನಕ್ಷತ್ರಕನಂ ನೆನೆವ—

## ಕಾಶೀನಗರದ ಶ್ಮಶಾನದ ಒಂದು ಕಡೆ

(ವಿಶ್ವಾಮಿತ್ರ-ನಕ್ಷತ್ರಕ)

### ನಕ್ಷತ್ರಕ

ಮಾಗುರುವೆ,

ಎಳತಂದಿರೇಕೆನ್ನನೀ ಮಸಣದೆಡೆಗೆ ?
ಕಜ್ಜವೇನಿಹುದಿಲ್ಲಿ ? ಸಲಿಸುವಿರ ಬೆಂತರನ ಪಡೆಗೆ
ನೆವವಿಲ್ಲದೆಯೆ ನರರ ಪೀಡೆಯೊಳು ನಲಿವುದನು ಕಲಿಯೆ
ಧ್ಯೇಯವೊಂದಿಲ್ಲದೆಯೆ ಮರುಕ ಸೋಂಕದ ಕ್ರೌರ್ಯವನು ತಿಳಿಯೆ ?

### ವಿಶ್ವಾಮಿತ್ರ

ಬೇಸರಾಯಿತೆ, ವತ್ಸ, ಈ ಶಿಷ್ಯವೃತ್ತಿಯೊಳು ?

### ನಕ್ಷತ್ರಕ

ಬೇಸರದ ಮಾತಲ್ಲ ; ಮಿತಿಯ ಮಾತಿದು ಗುರುವೆ.
ದೈವಹತಕನ ಕಾಡೆ ಗೈವುದೆಲ್ಲವ ಗೈದೆ,
ತೆರುವುದೆಲ್ಲವ ಪಡೆದು ತಮಗೆ ತಂದೊಪ್ಪಿಸಿದೆ.
ಸತಿಸುತರ ಮಾರಿಸಿದೆ ಕರುಣೆಯಿಲ್ಲದ ದಣಿಗೆ
ತಲೆಯೊಳಗೆ ಹುಲುಹೊತ್ತು ಪುರವಲೆಸಿ ಕೊನೆಗೆ ಆ
ಚಂಡಾಳಗಾಳಾಗಿ ಹೆಣಕಾಯಲಿರಿಸಿದೆ
ಈ ಪ್ರೇತವನದೊಳಗೆ ಸೂರ್ಯಕುಲದರಸನ.
ನನ್ನ ಪ್ರಕೃತಿಯು ತಳವ ಮುಟ್ಟಿಹೆನು ಕಜ್ಜದಿ ;
ಇನ್ನಿಳಿಯಲೆಡೆಯಿಲ್ಲ, ಮೃಗಕು ಮೃಗನಾಗಿಹೆ.
ಕನಿಕರಕೆ ಪಾತ್ರ ನಾ, ಕ್ರೋಧಕಲ್ಲ ಮಹರ್ಷಿ.

### ವಿಶ್ವಾಮಿತ್ರ

ಲೋಭದಿಂದಿದನೆಲ್ಲ ಗೈಯಿಸಿದೆನೆಂಬೆಯಾ ?

ನಕ್ಷತ್ರಕ

ಏನನೆಂಬಿರಿ, ಪೂಜ್ಯ, ರಾಜ್ಯವೆಲ್ಲವ ತೊರೆದು
ಭೋಗವೊಲ್ಲದ ತವಸಿಗೀ ಮಾತು ತಗುವುದೆ?

ವಿಶ್ವಾಮಿತ್ರ

ಕರುಬಿ ಕ್ರೌರ್ಯವ ತೋರಲಾಸೆಯೆನಗೆಂಬೆಯಾ ?
ಇಲ್ಲದಿರಲೀ ದೊರೆಯ ವಂಶಕ್ಕೆ ನಾ ಹಗೆಯೆ ?
ಸ್ವಾತ್ಮದಂಡನೆಯೊಳಗೆ ಸೊರಗಿಸಿಹೆನೇ ದಯೆಯ ?

ನಕ್ಷತ್ರಕ

ಮಧ್ಯಮ ಶುನಶ್ಶೇಪಗೊಲಿದವನು ನಿರ್ದಯನೆ ?
ರವಿಕುಲ ತ್ರಿಶಂಕುವಿಗೆ ವರವಿತ್ತವನು ಹಗೆಯೆ ?
ನುಡಿಬಡಿಗೆಯಿಂದೆನ್ನ ಬಡಿಯದಿರಿ ಪ್ರೇಮನಿಧಿ !

ವಿಶ್ವಾಮಿತ್ರ

ಮತ್ತೇಕೆ ಕಾಡುತಿಹೆನಿವನ ಬಲ್ಲೆಯ, ವತ್ಸ ?

ನಕ್ಷತ್ರಕ

ಋಷಿಗಳಿಬ್ಬರು ಹೋರೆ ತುಳಿವ ನೆಲವಾದನಿವ !

ವಿಶ್ವಾಮಿತ್ರ

ವತ್ಸ ನಕ್ಷತ್ರಕ,
ಹೋರುವವ ನಾನೆಯೋ ; ಸ್ಪರ್ಧೆ ಆ ಋಷಿಗಿಲ್ಲ.
ನೆಲೆನಿಂತವನು ಆತ, ಬೆಲೆಬಲ್ಲ ಧೀಮಂತ.
ಹಸುವೊಂದ ಮುಂದೊಡ್ಡಿ ತಾ ಬ್ರಹ್ಮರ್ಷಿ ನನ್ನ
ಕ್ಷಾತ್ರವನು ಶಮಿಸಿ ಗೆಲವಾಂತನೀ ಮೊದಲು ;
ಈಗಳೀ ಹುಸಿಕನನೆ ಸತ್ಯಸಂಧನನೆನಿಸೆ
ದೇವರಿದಿರೊಳೆ ಪಣವ ತೊಟ್ಟಿಹನು ಮಹಿಮ.
ಸತ್ತ್ವಶಾಲಿಗಳೊಡನೆ ನಿಸ್ಸ್ವಾರ್ಥಿಗಳ ಜತೆಗೆ

ಹೋರಾಡಲೊಳ್ಳಿತ್ತೆ ಮೌಲ್ಯಾಭಿಕಾಂಕ್ಷಿಗೆ.
ಅರಿತಿಹನು ಮಾಮುನಿ ಎನ್ನ ದೌರ್ಬಲ್ಯಗಳ
ಅಂತೆಯೇ ತುದಿಮುಟ್ಟಲೆನ್ನ ಮೇಲ್ಮೆಯ ಛಲವ.
ಎನ್ನಾತ್ಮಪಾವಕಾನಿಲನಾ ವಸಿಷ್ಠ
ಬಯಕೆಗೊಂಡಿಹನೇನ ಬೆಳಗಲು ಗರಿಷ್ಠ ?
ಶಿವನ ಮೆಚ್ಚಿಸಲರಿತೆ, ವಿಧಿಯ ಮೆಚ್ಚಿಸಲರಿತೆ
ಇವನ ಮೆಚ್ಚುಗೆವಡೆಯೆ ತೊಳಲಿಕೆಯೊಳೇ ಇಹೆ.
ಸಹಜ ಋಷಿಯಲ್ಲ ನಾ—ಪೌರುಷವ ನಂಬಿಹೆ.
ಎನ್ನ ವೈಶಿಷ್ಟ್ಯವಿದು, ಮಿಕ್ಕವರಿಗಳವಲ್ಲ
ಈ ತ್ಯಾಗ ವೈರಾಗ್ಯವೀ ದಾಂತಿಯೀ ಕ್ಷಾಂತಿ
ಗಾಧೇಯ ಲಭ್ಯಮೆನೆ ನಗುವನಾ ಬ್ರಹ್ಮರ್ಷಿ :
ಸಾಮಾನ್ಯ ಸಹಜವೀ ಮೌಲ್ಯಾನುಸ್ಮೃತಿಯೆಂದು,
ಈ ಹುಸಿಕ ಸುತಕಾಮಿ ಛವಿಯನೇ ಪಣವಿಡುತ.
ತ್ಯಾಗ ತಪದೊಳು ಪಳಗಿದಾಳಿಗೂ ಕಡುಕಷ್ಟ
ಮನದ ಜಯ, ರಿಪುದುರ್ಗದಮನವಿಜಯೋತ್ಸವ.
ಆ ಸೆಳೆತ ಬಿಗಿತಗಳ ಬವಣೆಯರಿತವ ನಾನು.
ಈ ಮೆದುಗನತ್ತಲೇ ನಡೆಯಲೆಳಸಿಹನಲ !
ಆವ ಸತ್ತ್ವದೊಳರಸು ಪ್ರಭುತೆಯನೆ ತೊರೆದ ?
ಚಂಡಾಳಗಾಳಾಗಿ ಕುಲಮದವ ತೊರೆದ ?
ಸಿರಿನೀಗಿ ಕಂಡವಗೆ ಸತಿಸುತರ ಮಾರುತ್ತ
ತೊರೆದನಭಿಮಾನವನು ಮಮತೆಗಳನೊತ್ತರಿಸಿ ?
ನಾನೆಯರಿಯದ ದಿವ್ಯ ಛಲವಾವುದನು ಕಂಡು
ಉರುಬಿ ಹೊತ್ತಿಸುತಿಹನು ಈ ಬಾಳೊಳಾ ಮುನಿ ?
ಎನ್ನ ಕೌತೂಹಲವ ಕೆರಳಿಸಿಹನೀ ದೊರೆ
ಇವನ ಶೋಧಿಸುವೆಸಕ ಶೋಧಿಸುವುದೆನ್ನನೂ !
ಕಾಮವೇನುಂಟಿವನೊಳಾ ಸ್ಥೈರ್ಯವೈರಿ ?
ಪರಿಕಿಸಲು ಬಯಸುವೆನು—ಇಬ್ಬರ ನೆರವ ಕೋರಿ.

### ನಕ್ಷತ್ರಕ

ನಾನೊಬ್ಬನಾಯಿತು—ಮತ್ತೊಬ್ಬನಾರು ಗುರು ?

ವಿಶ್ವಾಮಿತ್ರ

ಇಬ್ಬರೊಳಗೊಬ್ಬನೂ ನೀನಲ್ಲ ನಕ್ಷತ್ರ !

ನಕ್ಷತ್ರಕ

ಬದುಕಿದೆ ! ಬದುಕಿದೆ ! ಬಿಡುವಾಯ್ತು ! ಮತ್ತಾರು ?

ವಿಶ್ವಾಮಿತ್ರ

ನೀನೊರೆದ ಪರಿಯೊಳಗೆ, ನೆವವಿಲ್ಲದೆಯೆ ನರರ
ಪೀಡೆಯೊಳು ನಲಿವ ಆ ಬೆಂತರನ ಪಡೆಯೊಂದು :
ಆ ಪರಮ ಮೌಲ್ಯನಿಧಿ ಶ್ರೀರುದ್ರನೆಡಕಾಪು ;
ಅವುಗಳಂಕೆಗೆ ಬಯಸಿ ಲೋಕದೊಳು ಶುಭಗಳನು
ಹರಡಲಾಶಿಸುತಿರುವ ತವಸಿಪಡೆ ಮತ್ತೊಂದು :
ಆ ಪರಮಶಿವನಿಧಿಯ ಕಾಯುತಿಹ ಬಲಕಾಪು.
ಇವರ ನೆರವಿಂದಶುಭ ಜಾಲದೊಳು ಕೆಡಹುತ್ತ
ಶುಭಕಾಂಕ್ಷೆಗಳ ಬಳಿದು ಲೋಭಿಸುವೆನೀ ದೊರೆಯ
ಋಷಿಯೆಣಿಸುವಂಥವನೊ ನಾನೆಣಿಸುವಂಥವನೊ
ಪರಿಕಿಸುವೆನಿವನಳವ ಸುಡುಗಾಡೊಳಿದರೊಳು.

ನಕ್ಷತ್ರಕ

ಪಕ್ಷವಿಡಿದಾಡದೆಯೆ ಸನಿಯವಿರೆ ಬಯಸುವೆನು
ಸಾನ್ನಿಧ್ಯ ಶಿಕ್ಷಿತಂ, ತಮಗೆ ಜಯವನೆ ಕೋರಿ.

ವಿಶ್ವಾಮಿತ್ರ

ಇದರೊಳಿಬ್ಬಗೆಯೆನಗೆ ವತ್ಸ ನಕ್ಷತ್ರಕ !
ಇವ ಗೆಲ್ಲೆ ಋಷಿ ಗೆಲುವ: ನಾ ಸೋತೆನೆನಲಾರೆ.
ಇವ ಸೋಲಲವ ಸೋಲ್ವ : ನಾ ಗೆದ್ದೆನೆನಲಾರೆ !
ಸಾಮಾನ್ಯನಪ್ಪನಂದನಿವಾರ್ಯ ದುರ್ಬಲ !
ಮಾನವ ಪ್ರೇಮಿ ನಾ ; ಇವ ಸೋಲುವುದ ಬಯಸೆ
ಅತಿ ಕಟುಪರೀಕ್ಷೆಗೂ ಅಳವಡಿಸದೆಯೆ ಬಿಡೆ.
ನರನಳಲ ತಾಳದೆಯೆ ಮೌಲ್ಯಗಳನುದ್ಧರಿಸ ;

ಕನಿಕರಕೆ ಪಾತ್ರನೇ ಧ್ಯೇಯಾಭಿಗಮನರತ ?
ಬರಿ ಛಲಕೆ ನಡೆವನೊ ಪರಮಾರ್ಥ ಶಿವಫಲಕೊ,
ಈ ದೊರೆಯು ಪರಿಕಿಸುವೆ, ವತ್ಸ ನಕ್ಷತ್ರಕ !
ನಿನಗೊಂದು ಕಜ್ಜವಿದೆ ಈ ಪ್ರಯೋಗದಿ ಶಿಷ್ಯ.

ನಕ್ಷತ್ರಕ

ಮನ್ನಿಸಿರಿ ಮಾಗುರುವೆ, ಗಾದೆಮಾತಾಗಿಹೆನು ;
ಕಾಡುವುದ ಹೊರತು ಮತ್ತೇನನಾದರು ಗೈವೆ.

ವಿಶ್ವಾಮಿತ್ರ

ಅಂಜದಿರು, ಆಯುಷ್ಮನ್, ನೀನೊಪ್ಪುವಂಥದನೆ
ಬೆಸಕೈವೆ, ಆಲಿಸು—ದೊರೆಗೆ ಕೇಡುಗಳೆಸಗೆ
ಬೆಂತರನ ಮುಂಬಿಡುವೆ. ಅಶುಭಗಳ ಪರಿಹರಿಸಿ
ಹದುಳದಾಸೆಯ ಬೆಳಸೆ ಮಸಣ ಮುನಿಗಳ ನೀನು
ಲೋಭಿಸಲು ಬಿಡುವೆನೈ. ಹೋಗು, ಹೋಗೆಲೆ ವತ್ಸ
ತಕ್ಕ ಸಮಯವನರಿತು ಬೆಂತರನ ವಶಗೈವ
ಮಹದಿಚ್ಛೆಯನು ಬೆಳಸು ಆ ತವಸಿವೃಂದದೊಳು ;
ರಾಜಸೂಯಾಧ್ವರದಿ ಸ್ನಾತನಾದರಸನಿವ-
ನೊಸೆದೀವ ಹೆಣದಕ್ಕಿ ವಸ್ತ್ರದಿಂ ಹವನಿಸಲು
ತನ್ನಿಯತ ಕಲ್ಪದಿಂ ಮಸಣರುದ್ರಂ ತಣಿದು
ಬೆಂತರಗಳೊಡೆತನವನಪಮೃತ್ಯು ದಾಂತಿಯಂ
ಕರುಣಿಸುವನೆಂದರುಹು ನನ್ನ ಮಾತಿದು ಎಂದೆ.

ನಕ್ಷತ್ರಕ

ಮಿಡುಮಾತನರಿಯೆನೈ–ಹೊಸಕಲಿಕೆಯೆನಗಿದು.

ವಿಶ್ವಾಮಿತ್ರ (ನಗುತ್ತ)

ಕಲ್ಪಿಸಿಕೊ ನಡಕೆಯೋ ನಿನ್ನ ಶಿಕ್ಷಣಕಿದ
ಹೊಸ ಕಲಿಕೆಯವಕಾಶವಿದನು ಕೈಬಿಡದಿರು.
ಮೊಗದೋರದಿರು ದೊರೆಗೆ—ಕಾಣೆ ಜಾಗ್ರತನಪ್ಪ !

**ನಕ್ಷತ್ರಕ**

ತಲೆಯೊಳಾಣತಿ ಹೊತ್ತೆ, ಪ್ರಣಮಿಸುವೆ ಭಗವನ್.

**ವಿಶ್ವಾಮಿತ್ರ**

ಜಯಶಾಲಿಯಾಗೆಲೈ—ನಿನ್ನ ವಾಕ್ ವರ್ಧಿಸಲಿ!

(ನಕ್ಷತ್ರಕ ಹೋಗುವನು)

ನಾನೆಯೊಲ್ಲದನೇನುಮೀ ದೊರೆಗೆ ಗೈಯೆನು,
ಮುಂದಿನಾಲೋಚನೆಗೆ ಬೆಂತರನ ನೆನೆವೆನು:
ಓ ಮಸಣದೀ ಹಳುವನಾಳುತಿಹ ಶಿವಬಂಟ,
ದುಷ್ಟಸತ್ತ್ವಗಳರಸೆ, ಇತ್ತ ಬಾ, ಸನ್ನಿಧಿಸು.

(ವ್ಯಂತರಾಧಿಪತಿ ತಕ್ಕ ಭೀಕರ ಕರಾಳ ವೇಷದೊಡನೆ ಅವತರಿಸುತ್ತಾನೆ.)

**ಬೆಂತರ ದೊರೆ**

ಎದೆಯಿಲ್ಲ ಮನವುಂಟು ಬರಿಗಾಳಿ ನಾನು
ನಿನ್ನೂಹೆ ರೂವಾಂತು ಬಂದೆ ; ಬೆಸನೇನು ?
ಓ ಮರೆತೆ, ಶರಣೆಂಬೆನ್ನೈ ಮಾಮುನಿ,
ಕೇಡನೆಸಗಲು ನಿನ್ನ ತೋರುಗೈಗಾನು ಋಣಿ.

**ವಿಶ್ವಾಮಿತ್ರ**

ಬೆಸಕೈದ ಕಜ್ಜವನು ಗೈದೆಯಾ ಬೆಂತರ ?

**ಬೆಂತರ ದೊರೆ**

ಕೇದಗೆಯ ಹೊದರಿನೊಳು ಕಂಪು ಹರಡಿತ್ತು
ಮಗನ ಮನದಲಿ ಹೂವಿನಾಸೆ ಕೆರಳಿತ್ತು
ಅಲ್ಲಿ ಹೂ ಇರುವುದೇ ಅವಗೊಂದು ಕುತ್ತು!
ಕೈಚಾಚುವನು, ಇದ್ದಿತಲ್ಲುರಗ ಮಿತ್ತು.
ಹಾವಗಿಯೆ ಗರವೇರಿ ಬಿದ್ದನಾ ಹಸುಳೆ
ಮರುಕವಿರದೂರೊಳಗೆ ತಿರಿದಳಾ ತರಳೆ
ತಿರಿತಿರಿಯುತೊಂಟಿಯೊಳು ಬರುತಿರುವಳಿತ್ತಲೆ
ಹೆಣಹೊತ್ತು ಮಸಣಕ್ಕೆ ಬರುಗೈಯೊಳೆ.

### ವಿಶ್ವಾಮಿತ್ರ

ಮರುಗುವೆದೆಯೊಂದನೂ ಕಾಣದಾದಳೆ ತರುಣಿ ?
ಛಳರೆ, ನಿನ್ನೆಸಕದೊಳು ಹಿರಿಹೊಳಲೆ ನಿರ್ಘೃಣಿ !

### ಚಿಂತರ ದೊರೆ

ಅಲ್ಲಿ ಹಿಂಗಿದುದಿಲ್ಲಿ ಹೊಂಗಿದರು ಹೊಂಗಿತೇ
ನಮ್ಮ ಹವ್ಮನು ಮಸಣ ನುಂಗಿದರು ನುಂಗಿತೇ !

### ವಿಶ್ವಾಮಿತ್ರ

ಮರುಗುವೊಡೆ ಗೆಲವೆಮಗೆ ವೀರಬಾಹುಕನಾಳು ;
ಮರುಗಿ ಹುಸಿಯಲು ದಣಿಗೆ ಶಪಥವಪ್ಪುದು ಹೋಳು !

### ಚಿಂತರ ದೊರೆ

ನನಗಿವನ ಪಾಡಿಲ್ಲ, ನನ್ನಂಜಿಕೆಯೆ ಬೇರೆ ;
ಈ ರುದ್ರಮುನಿಗಳ ಕಿರುಕುಳವ ತಾಳಲಾರೆ.
ನಮ್ಮನಾಳಲು ಬಯಸಿ ಇಲ್ಲೆ ತಪವಿಹರವರು
ಅಥರ್ವವಿಧಿಗಳನು ಬಲ್ಲ ಬಲ್ಲಿದರು.

### ವಿಶ್ವಾಮಿತ್ರ

ನಿನ್ನ ಬಳಗವದಯ್ಯ ! ಅವರೊಳೇತಕೆ ಭೀತಿ ?
ಅವರ ನೆರವಿಂದಲೇ ಭವಿಗೆ ಭವದೊಳು ಪ್ರೀತಿ.
ಶುಭಾಶುಭಗಳ ತ್ಯಜಿಸಿ ಶಿವನಿಧಿಗೆ ದಾಳಿಯಿಡೆ
ಬಹರಿಗಿವರೊಡ್ಡುವರು ಶುಭದ ಕಾಂಕ್ಷೆಯ ತಡೆ !
ನಿಮ್ಮ ಪೂಜೆಗಿು ಇವರು ಮನವ ಕೊಟ್ಟಿಹರಲ
ನಿಮ್ಮ ಶಕುತಿಯೊಳಿವರ ವಿಶ್ವಾಸವಚಲ.
ಇವರಲ್ಲ ಇದಿರಾಳು—ಹಸನೆಮ್ಮಗೆ ಇವರ ಬಗೆ
ಸುಡುಗಾಡನಿದ ಕಾಯ್ವ ದೊರೆ ನಿಮಗೆ ತಕ್ಕ ಹಗೆ !
ನಿಮ್ಮ ಕಾವಲ ತೂರಿ ಹಾಯ್ವನಿವ ಶಿವನಿಧಿಗೆ.
ಆಸೆ ಜಾರಿನೊಳಿವನ ಜಾರಿಸಲು ಭವದೆಡೆಗೆ
ಬಳೆಯಲಿ ಮುನಿಗಳೊಳು ನಿಮ್ಮ ನಾಳುವ ಕಾಂಕ್ಷೆ.

ಶಿವಸೌಖ್ಯನಿಧಿಯ ಕಾಪಿಡುವ ಕರ್ತವ್ಯದೊಳು
ಬರುವಿನಿಸು ಕಿರುಕುಳವ ವ್ಯಂತರಾಧಿಪ ತಾಳು.
ಅಶಿವ ಪಕ್ಷವ ಹಿಡಿದು ಮುಳಿವಷ್ಟು ನೀ ಮುಳಿ ;
ಸುಲಭವೆನ್ನಿಸದಿರೈ ಕಲ್ಯಾಣನಿಧಿಗೆ ಬಳಿ.
ಇಂದುವರೆಗಿಳಿಯೊಳಿಗೆ ವಚನಪಾಲನವೆಂಬ
ಬೆಲೆಗೆ ತನ್ನೆಲ್ಲವನು ತೆತ್ತನಾವನು ಹುಂಬ ?
ಸಮಯ ಸಂದರ್ಭದೊಳು ದೇವರೇ ಮಾತುಗೆಡೆ
ಈ ಮರ್ತ್ಯನೊಳಗೆಂತು ಸತ್ಯವಚನಕ್ಕೆಡೆ ?
ನೀವು ಬೆಂಬಲಕಿರಲು ನಾನದನು ನಡೆಯಗೊಡೆ
ಜವನ ನೆರೆಗೊಂಡಿವನ ಮುರಿವವರೆಗೂ ಬಿಡೆ !

ಬೆಂತರ ದೊರೆ

ಕಶವೆ ಬೇಕಿಲ್ಲೆಮಗೆ ಕೇಡೆಸಗೆ ಮುನಿವರ !
ನಮ್ಮ ಬಲ ಕೆಡದಂತೆ ನೋಡಿಕೋ ನೀನವರ.

ವಿಶ್ವಾಮಿತ್ರ

ನಿನಗಾಗದಿರಲಯ್ಯ ರುದ್ರಮುನಿಗಳ ಚಿಂತೆ
ಭೂತದಮನೇಜ್ಯೆಯನು ಪ್ರಬಲಿಸುವೆನವರೊಳು.
ಅರಸು ಮಸಣವ ಕಾಯ್ವ ಬೆರಗಿನೀ ಸಮಯದೊಳು
ಅವನ ಯಾಚಿಸಿ ಪಡೆವ ಶವಶೇಷ ದ್ರವ್ಯದಿಂ
ಭೂತೇಜ್ಯೆಯನು ರಚಿಸಿ ತಣಿಸುತಾ ಕವ್ಯದಿಂ
ನಿಮ್ಮೆಲ್ಲರನು ವಶಕೆ ತರುವ ಶುಭಲೋಭದೊಳು
ನಿಲ್ಲಿಸುವೆನವರ ನಾನಿಂದು ಈ ಹಳುವಿನೊಳು.
ಸೋಲೆ ನಿಮಗೆಡರಿಲ್ಲ ; ಗೆಲ್ಲೆ ಶುಭವನು ಸಲಿಸಿ
ಬಿಡುಗಡೆಯ ಪಡೆವಿರಿ ಅವರ ಹಂಗಿನೊಳಿರಿಸಿ.

ಬೆಂತರ ದೊರೆ

ಭಳಿರೆ ಗಾಧೇಯ ಮುನಿ ! ಎರಡು ಸಮ್ಮತವೆನಗೆ
ನಿನ್ನಿಚ್ಛೆ ಹಕ್ಕಿಗರಿಗೀ ಗಾಳಿ ಬಲುಸಲಿಗೆ.

## ಶ್ಮಶಾನದೊಂದು ಸ್ಥಳ

(ಶ್ಮಶಾನ ರುದ್ರೋಪಾಸಿಗಳು ಪ್ರವೇಶಿಸುತ್ತಾರೆ)

**ರುದ್ರೋಪಾಸಿಗಳು**

ಜಯ ಜಯ ಜಯ ಶರಣು ಶರಣು
ಭೂತನಾಥ ಶಿವನಿಗೆ
ಸುಡುಗಾಡೊಳು ಸೂತ್ರಹಿಡಿದು
ಜಗವಾಡಿಸುತಿರುವಗೆ.

ಗಂಧದ ಕೊರಡಿನ ಚಿತೆಯೊಳು
ತುಪ್ಪದ ಕಮರೆಬ್ಬಿಸಿ
ಹೊಗೆಯ ಜಟಾಜೂಟ ಕುಣಿಯೆ
ತಾಂಡವಿಡಿಸುವ ಅಗ್ನಿಗೆ.

ದಾನಧರ್ಮ ಪ್ರೇತಕರ್ಮ
ವಿತರಣೆಗಳ ವಿತರಿಸಿ
ಪ್ರೇತ ನಡೆವ ಹಾದಿಗಳನು
ಹದುಳಗೈವ ಜವನಿಗೆ.

ಇಹವಿಲ್ಲದೆ ಪರವಿಲ್ಲದೆ
ದೇಹದ ನೆಲೆಯಿಲ್ಲದೆ
ಭೂಮಿ ಬಾನ ನಡುವೆ ಅಲೆವ
ಬೆಂತರಗಳ ರಾಜಗೆ.

ನಾರುವ ಹೆಣ ತನ್ನೊಲಾಗೆ
ಶಿವಕುಸುಮ ಪ್ರಸವಿನೀ
ಒಡಲೊಳಿಟ್ಟು ಮಮತೆ ತೋರ್ವ
ತಾಯೆ ಶರಣು ಧಾರಿಣೀ !

ಜಯ ಜಯ ಜಯ ಶರಣು ಶರಣು
ಭೂತನಾಥ ಶಿವನಿಗೆ !

(ಇವರು ಈಗ ಸಮಾರ್ಧವಾಗಿ ನಿಲ್ಲುತ್ತಾರೆ)

### ಎಡಮೇಳ

ಸೂರ್ಯಲೋಕದಾಚೆಗಿರುವ
ತೇಜಗಳನು ತಂದು
ನಿದ್ದೆ ಮರೆಯೊಳಿರುಳು ತಿರೆಗೆ
ಮೊಲೆಯನೂಡುವಂದು,
ಗವಿಯ ಬಾಯ್ಗಳಲ್ಲಿ ಚೀರಿ
ಎಲೆಯ ತುಟಿಯೊಳೂಳಿ
ಬಿದಿರ ಮೆಳೆಗಳಲ್ಲಿ ಸುಯ್ದು
ಗೋಳಿಡುತಿಹ ಗಾಳಿ
ಆರ ಕೊರಲಿನಿಂದದಾವ
ಭಾವವಿವರದಿಂದ
ಬಹುದು ? ಇಂತು ಅಸುಖೋತ್ಕಟ
ಆವ ಜೀವಬಂಧ ?

### ಬಲಮೇಳ

ಪ್ರೇಮವ ದೊರಕಿಸಲರಿಯದೆ
ಜೀವ ಮೈಯೊಳಾರೆ
ದುಸ್ಸಹದವಮಾನದ ಭಾ-
ರಕೆ ಪ್ರಾಣವ ಕಾರೆ ;
ಢಾಳಯಿಟ್ಟು ಶೋಕಮೋಹ
ಅಲ್ಪಾತ್ಮರ ಮೇಲೆ
ಎಳಗಿಡುಗಳ ಮದ್ದಾನೆಯ
ತೆರ ತನುಗಳ ಕೀಳೆ ;
ಸ್ನೆಹರಸದ ಹಸಿಮೆ ಹಿಂಗಿ
ದ್ವೇಷದ ಕಿಡಿ ತಾಗೆ
ಛಲದೊಳೊಣಗಿ ಸೆಟೆದಿಹ ಮನ
ಆತ್ಮದಾಹಕಾಗೆ ;
ಚಪಲಧರ್ಮರಾಹುತಿಗಳ
ನಯದೇವತೆ ಕೇಳೆ

ನ್ಯಾಯ ಯಜ್ಞದಲ್ಲಿ ದಗ್ಧ
ವಾಗೆ ಬಾಳುಬಾಳೆ ;
ಮದ ಮತ್ಸರದಾವೇಗವು
ನಲ್ಮೆಯ ದಡಕಿತ್ತು,
ಜೀವದೊಸಗೆಹೊಳಲ ಕವಿಯೆ
ದೋಣಿಯಾಡೆ ಮಿತ್ತು ;
ನೆಲದಿ ಸಿಡಿವ ಬಾಣದಂತೆ
ಮೇಲಕ್ಕೇರದಿಲ್ಲ
ಭ್ರಷ್ಟಜೀವರಾತ್ಮವಲೆವು
ದೆಮ್ಮ ಸನಿಯದಲ್ಲೆ !

### ಎಲ್ಲರೂ

ಮರುಗುವೆವು ನಾವಿಂಥ ತನುಯಂತ್ರವಿಲ್ಲದೆಯೆ
ಅನಿಯಂತವಾಗಿರುವ ಜೀವಜಾತಕ್ಕೆ
ಮಸಣದೆಡೆ ಮೆಳೆಮರಗಳಲಿ ಹುಯಿಲುಗೊಳುವುದಕು
ಮಿಗಿಲಾಗಿ ಬಯಸುವವು ಮನಜಕಂಠಕ್ಕೆ ;
ಅದರಿನರಸುತ್ತಿಹವು ಶಿಥಿಲಮನದಸುಖಿಗಳ
ತಮ್ಮ ಭಾವದೊಳವರನಾವೇಶಗೊಳಿಸೆ :
ಸಾಧು ಬಾಧಕನಾಗಿ, ಭೀರು ಭೈರವನಾಗಿ
'ವಿಷಮ ವರ್ತನೆ ತೋರುತೇನು ಬೆರಗೆನಿಸೆ !
ಅಶಿವದೀ ಶಕ್ತಿಗಳು ವಶವಾಗಿ ನಮ್ಮಿಚ್ಛೆ
ಗೊಳಪಡುವ ರೀತಿಯೊಳು ಶಾಂತಿಗಳ ರಚಿಸಿ
ಮಸಣದೊಳು ತಪವಿಹೆವು ಭೀತಿ ಹೇಸಿಕೆಯುಳಿದು
ಪ್ರೇತಭೂತಪಿಶಾಚಗಳ ನಯದೊಳಿರಿಸಿ.

### ಉಪಾಸಿಪ್ರಧಾನ

ಆದೊಡೆ ಆಹಾ ನಾನೇವೇಳ್ವೆ
ನೆನೆದೊಡಾ ಬೆರಗನೀಗಳು ತಾಳ್ವೆ !
ಸೋನೆಕಣ್ಣೀರ ಮಸಣಕೆ ತೆತ್ತು
ನಿನ್ನೆಯಿರುಳು ಆಗಸವಳುತಿತ್ತು.

ಅಕುಶಲ ಸೂತನ ಕಶಾಘಾತದೊಲು
ಚಿತಾಗ್ನಿಗಾಯಿತು ಈ ಮಳೆಗೋಲು.
ಅರೆಬೆಂದಟ್ಟೆಗಳೆದ್ದು ಕುಳಿತವು
ಭೇತಾಳಗಳವ ತಬ್ಬಿ ನಿಂತವು.
ಜೊಂಪಿಸುವರಳಿಯ ಮರದೊಳು ತೂರಿ
ಮಿಂಚುಹೊಳೆಯ ಜಡೆಮುನಿಗಳ ತೋರಿ
ಮಳೆ ಹನಿಯುತಿತ್ತು ಕೂದಲಿನಂತೆ.
ತಲೆಕೆದರುತ ರೋದಿಸುತಿರುವಂತೆ
ಭೂತಾಧಿಷ್ಠಿತೆ ಪರವಶಳಾಗಿ
ವಿಕಟಸ್ವರದೊಳು ಗಾಳಿಯು ಕೂಗಿ
ಹಾಯುತಲಿದ್ದಿತು ಹಳುವಿನ ಮೇಲೆ.
ಮೋಡದ ಹುತ್ತದ ಮಿಂಚಿನ ಮಾಲೆ
ಯಜ್ಞಾಹುತಿಗಳ ಸರ್ಪಗಳಂದದಿ
ಉದುರುತಿದ್ದುವೈ ಮಸಣದ ಕುಂಡದಿ
ಮಿದುಗುಡುಗಿನ ಮಂತ್ರೋಚ್ಚಾರಣೆಗೆ ;
ಬೆಚ್ಚಿದೆನೀ ಪ್ರಕೃತಿಯ ಘೋರಣೆಗೆ.
ಒಂದು ಮಿಂಚೆದ್ದು ಹಾರಿತಾ ದೆಸೆಗೆ
ಹರನ ಜಡೆಯಿಂದ ಹಾವು ಚಿಗಿದ ಬಗೆ.
ಆವ ವಿಪತ್ತೋ ಇತ್ತೆಡೆ ಹೊಂಚಿದೆ
ನಿಲ್ಲದು ಬೆಂತರಗಳ ವಶಗೊಳದೆ ;
ಅಶಿವಶಕ್ತಿಗಳು ಉಜ್ಜೃಂಭಿಸುತಿವೆ
ತಪಃಪ್ರಭಾವ ಮಿಕ್ಕು ನಗುತಿವೆ ;
ಪ್ರೇರಣೆಯಾಗಿದೆ ಮಹಾಶಾಂತಿಗೆ
ಭೂತಬಲಿಯೊಳಪಮೃತ್ಯುದಾಂತಿಗೆ.

(ಈಗ ನಕ್ಷತ್ರಕ ಪ್ರವೇಶಿಸಿ ಮರೆಯಾಗಿ ನಿಲ್ಲುತ್ತಾನೆ)

**ಬಲನೋಳ**

ಆಹಾಹಾ ಮುಸರುತಿವೆ ಮುತ್ತುತಿವೆ
ಸೊಗಹೀರಲು ಮನಮನಗಳ ಚುಚ್ಚುತಿವೆ
ಜೇಗುಟ್ಟುತ ಜಾನವ ಕೆಡಿಸುತಿವೆ

ಮಾಳರಿಳೆಗೆ ಬುದ್ಧಿಯ ದೂಡುತಿವೆ.
ನರಗಾಯಿತು ಚಿಂತೆಯ ಕುರುಡಲೆತ
ಸತ್ತ್ವದ ಕಾರ್ಪಣ್ಯದ ಒಳಕೊರೆತ !

ಎಡನೋಳ

ಬರಿಗೆರೆಯೊಳ್ ನೋಟವ ತುಂಬುತಿವೆ
ಓರಣಗೆಡಿಸಂದವ ನುಂಗುತಿವೆ
ಔತಣಕಿವು ನೆರೆದಿಹವೀ ಜಾವ
ಕಿತ್ತುಣ್ಣಲೆಲುಬಾಗಲು ಭಾವ

ಎಲ್ಲರೂ

ಎಬ್ಬಿಸೈ ದುಸ್ಸತ್ತ್ವದಮನ ಶಿವಶಕ್ತಿಯ
ನೆರವುಗೊಳ್ಳುತಲೀಗಳಾಥರ್ವಸೂಕ್ತಿಯ.
ಹಿಂದಿನಂತಾಗದೊಲು, ಹೊಚ್ಚ ಹೊಸ ವಿಧಿಯ
ಕಲ್ಪಿಸೈ ವಶಕೆ ಬರೆ ಬೆಂತರಗಳೆರೆಯ.

ಉಪಾಸಿಪ್ರಧಾನ

ನೆನವೆನ್ನನಲೆಸುತಿದೆ ಗೆಯ್ದಗೆಯ್ಮೆಯೊಳ್
ಶ್ರದ್ಧೆ ಕಾಲಿಡುತಿಹುದು ಸಮೆದ ಹಾದಿಯೊಳ್.
ಬಲ್ಲ ಕಲ್ಪಂಗಳೊಳು ಫಲದ ಸಂದೇಹ.
ನಮ್ಮನೇ ನಗುತಿಹುವು ಅಶಿವ ಸಂದೋಹ !

ಉಪಾಸಿಗಳು

ಇದಕಾವ ಶಾಸ್ತ್ರವಿಧಿ, ಇದಕಾವ ದ್ರವ್ಯ
ಏಗೈಯಲೊಲಿವುವು, ಇವಕಾವ ಕವ್ಯ ?
ಅವಿಧಿನಾ ಕೃತಮಕೃತಮೆಂಬುದಲ ಸೂಕ್ತಿ
ಅರಿತರಾರರಿತರಾರಿಗೇನು ಯುಕ್ತಿ ?

ನಕ್ಷತ್ರಕ (ಪ್ರವೇಶಿಸಿ)

ಹುತ್ತ ಬಡಿದು ಹಾವ ಕೊಲುವೆ
ನೆಂಬ ಹುಂಬರೇ !

ತಕ್ಕ ವಿಧಿಯನರಿಯದಿಂತು
ಹುಯಿಲುಗೊಂಬರೆ ?
ಬರಿದೆ ಬರಿದೆ ತಪವಿಹಿರಿ
ಮರಳಿ ಮರಳಿ ಬರುತಿಹಿರಿ
ತಿರಿತಿರಿದಿದ್ದೆಡೆಗೆ !
ಗುರಿಯೊಕ್ಕಡೆ ಕಣೆಯೊಕ್ಕಡೆ
ಬರಿ ಸುಯ್ವುವೆ ಕಡೆಗೆ.

**ಉಪಾಸಿಪ್ರಧಾನ**

ಈ ತೆರದೊಳು ಮಸಣರುದ್ರ-
ಭಜಕರ ಕುರಿತಾಡುವ
ನಮ್ಮೊಳಗನೆ ತೋಡುವ
ನೀನದಾರು ದಿಟ್ಟ ತವಸಿ,
ನಿನ್ನ ಗುರು ಅದಾವ ರಿಸಿ ?
ಬಲು ಬಲ್ಲವನಂತಾಡುವೆ
ನಮ್ಮುಜ್ಜುಗವೆಂತು ಹುಸಿ ?

**ನಕ್ಷತ್ರಕ**

ಅರಿಯಿರ ಗಾಧೇಯ ಮುನಿಯ ?
ಇಹೆ ನಾನಾತನ ಸನಿಯ !
ಅರಿತಿಹನವ ನಿಮ್ಮ ಪರಿಯ
ಬೆಂತರಗಳ ಗೆಲುವ ಗುರಿಯ.

**ಉಪಾಸಿಪ್ರಧಾನ**

ರುದ್ರನ ಮೆಚ್ಚಿಸಿ ಋಷಿಯಾದವನ
ಬ್ರಹ್ಮನೆ ಮಹರ್ಷಿ ಎಂದವನ
ಅರಿಯವೆ ನಾವಾ ಲೋಕವಿಶ್ರುತನ
ವಿಶ್ವಾಮಿತ್ರ ಮಹಾತ್ಮನ ?
ಅಥರ್ವಾದಿ ಗುರುವಾತನು ನಮಗೆ
ಕಲಿಸಿದನಾತನೆ ಮಸಣದ ಸಲಿಗೆ.

ಸ್ವಾಗತ ನಿನಗಿದೊ—ನೆನೆದನೆ ಮಾಮುನಿ
ನಿನ್ನನಟ್ಟಿದನೆ ನಮ್ಮೆಡೆ ಕರುಣಿ ?

ನಕ್ಷತ್ರಕ

ಅಶಿವ ದಮನವೇ ಮಹರ್ಷಿಯಿಚ್ಛೆ !
ಆ ಕಲ್ಪವಲಾ ನಿಮ್ಮಯ ಪೃಚ್ಛೆ ?

ಉಪಾಸಿಪ್ರಧಾನ

ಅಹುದಹುದದ ನಡೆಸುವುದೇ ಬಯಕೆ.

ನಕ್ಷತ್ರಕ

ಸರಿ ಸರಿ,
ಬಲ್ಲ ಕಲ್ಪದೊಳೆ ಸಲುವುದು ಕೋರಿಕೆ.
ಆದೊಡೆ,
ತಪ್ಪೆಣಿಸಿಹಿರಾ ದ್ರವ್ಯದ ಬಗೆಗೆ ;
ಮುನಿಯಿದನರಿಯಿಸ ಬಯಸಿಹ ನಿಮಗೆ.

ಉಪಾಸಿಪ್ರಧಾನ

ಕೃತಜ್ಞರಾವು, ಪೇಳ್ವೆ ! ಪೇಳ್ವೆ !

ನಕ್ಷತ್ರಕ

ನರಕಪಾಲದೊಳು ಹೆಣಬಾಯುಕ್ಕಿಯ
ಹೋಮಿಸಲಿಷ್ಟಾರ್ಥದ ಸಲಿಕೆ !
ಅತಿನೀಚಸ್ಥಿತಿಗಿಳಿದತ್ಯುನ್ನತ-
ನೀವಾ ದ್ರವ್ಯವೆ ಲೇಸಿದಕೆ.

ಉಪಾಸಿಪ್ರಧಾನ

ದುರ್ಲಭವೇ ಸೈ !—ಕನಸೀ ಕಲ್ಪ—
ಬೆಂತರಗಳಿಗಾದೆವು ನಾವಲ್ಪ !

ನಕ್ಷತ್ರಕ

ಇಷ್ಟಕೆಯೇ ನಿಡುಸುಯ್ಯಲನಿಡುವರೆ
ಇದಿರೇ ಇರೆ ನಿಧಿ, ಬೇರೆಡೆ ತಿರಿವರೆ ?

ಉಪಾಸಿಪ್ರಧಾನ

ಒಗಟನೇತಕೆ ನುಡಿವೆ, ವಿಶದಗೊಳಿಸೈ, ಮಿತ್ರ.

ನಕ್ಷತ್ರಕ

ಇಹನು ಕೂಗಳತೆಯೊಳೆ ನಿಮ್ಮ ಕೊಡುಗೈದಣಿ !
ಬಲ್ಲಿರಾ, ರವಿಕುಲದ ದೊರೆ ಹರಿಶ್ಚಂದ್ರನ ?
ತ್ಯಾಗದುನ್ಮದದೊಳಗೆ ತನ್ನೆಲ್ಲವಿತ್ತವನ ?
ಗಜವೇರಿ ಕವಡೆಮಿಡಿದೆತ್ತರದ ಹೊನ್ನ ಮುನಿ
ದಕ್ಷಿಣೆಗೆ ಕೋರಲದ ಸುತನೊಡನೆ ಸತಿಯನೂ
ತನ್ನನೂ ಮಾರಿಕೊಂಡವಗಿತ್ತ ಧೀರನ ?
ಅವನೆ ಈ ಮಸಣವನು ಕಾಯುತಿರುವಾಳು.

ಉಪಾಸಿಪ್ರಧಾನ

ಈ ರುದ್ರಭೂಮಿಯನು ಕಾವಾತನಾ ದೊರೆಯೆ !
ಆ ಸಾರ್ವಭೌಮನಿಗೆ ಈ ನೀಚಗತಿಯೆ ?

ನಕ್ಷತ್ರಕ

ಮಹಿಮರೆರೆವುದನೀಯಲೆಳಸುವುದು ಸಾಹಸ

ಉಪಾಸಿಪ್ರಧಾನ

ಆ ಕೋರಿಕೆಯ ಸಲಿಸಲೆಸಗುವವ ಮಾಪುರುಷ

ನಕ್ಷತ್ರಕ

ಅಂಥ ಮಹಿಮನ ನಿಮಗೆ ದೊರಕಿಸಿದೆ ದಿಷ್ಟ.
ಅವನೀವ ದ್ರವ್ಯದಿಂ ಕಲ್ಪವಾಗದು ನಷ್ಟ;
ಆದೊಡಾಶನನಿದಕೆ ಒಪ್ಪಿಸುವುದತಿಕಷ್ಟ.

ಉಪಾಸಿಪ್ರಧಾನ

ಋಷಿಯನೇ ತಣಿಸಿದವ ತಣಿಸನೇ ಅಲ್ಪವಿದ ?

ನಕ್ಷತ್ರಕ

ಎಡರುಗಳು ಬಳಿಗೊಡವು ಸುಲಭದೊಳು ಶುಭಕೆ
ಸ್ವತ್ವಾರದೀವನಾರ್ ಏಕಜ್ಞವೆಂಬವು,
ನೀತಿ ನಯಗಳು ಬೆರೆದ ನೂರು ತರ್ಕವ ತಹವು
ನೆವವನೊಡ್ಡುವುವಿವನ ಸದ್ಭಾವವಳಿಯೆ;
ಭಯಲಾಭಗಳೆ ಸನಿಕೆ, ಲೋಭವತ್ತೆಡೆ ಸರಿಯೆ.

ಉಪಾಸಿಪ್ರಧಾನ

ಅರಿಯೆವಲ ನಾವವನ ಭೀತಿಯನು ಕುರಿತಾಡೆ
ಅರಿಯೆವಲ ನಾವವಗೆ ಲಾಭದಾಸೆಯನೂಡೆ.

ನಕ್ಷತ್ರಕ

ಜೀವಗೂಡಿರುವವಗೆ ಭೀತಿ ಸಾಸಿರವುಂಟು ;
ಶಂಕೆಯುಳಿವುದೆ ಲಾಭ, ಅದುವೆ ಹದುಳದ ನಂಟು.

ಉಪಾಸಿಪ್ರಧಾನ

ಈ ಕೇಡಿಗೂ ಕೇಡದಾವುದೀತಗೆ, ಕೆಳೆಯ ?

ನಕ್ಷತ್ರಕ

ತಿಳಿವು ಮುಸುಕಾಗಿಹುದು, ಸ್ಪಷ್ಟತೆಗೆ ನೆನೆ ಮುನಿಯ !

ಉಪಾಸಿಪ್ರಧಾನ

ಆಹಾ ! ಆಹಾ !
ಕಣ್ಣಿಗೆ ಕಟ್ಟಿತು ಹೊಳಲಿನ ಹಳುವು
ಅಗೊ ಅಗೊ ! ಹುಡುಗನ ಕಚ್ಚಿತು ಹಾವು !
ಗರವೇರುತ ಕೆಳಗುರುಳಿದ ಹಸುಳೆ
ಅವ್ವಾ ಎನ್ನುತ ಚೀರುತಲೆ.

ನಕ್ಷತ್ರಕ

ಆ ಸುತನಿಗಾಗಿಯೇ ದೊರೆ ಹುಸಿದ ದೇವತೆಗೆ
ಅವನುಳಿಯಲೆಂದೆಯೇ ಮನಗೊಟ್ಟ ನರಬಲಿಗೆ

ಉಪಾಸಿಪ್ರಧಾನ

(ದೂರದರ್ಶಿಯ ಬಗೆಯಲ್ಲಿಯೇ)

ಹೊರಟಿಹವ್ಯೆ ಕೇಡಿನ ಪಡೆ ಪುರದೆಡೆಗೆ
ಇವಕಾಯಿತು ಜನದನುಕಂಪೆಯ ಸುಲಿಗೆ.
ಏವೇಳ್ವಿನೇವೇಳ್ವಿನೈ,
ಕೈಸಾಗದವರ ಕಡೆಗೋಡುತಿದೆ ಮರುಕ
ಲೇಸಿನಾಸರೆಗಿಲ್ಲವಾದನಲ ಧನಿಕ
ಬರುಗೈಯೊಳಟ್ಟುವನು ವಿಪ್ರನಾ ತಾಯ
ಪುರವಾಯಿತಿವಳ ಪಾಲಿಗೆ ಮೃತಪ್ರಾಯ.

ನಕ್ಷತ್ರಕ

ತೊಡವಿರಾ ಸಾಧ್ವಿಯಿೀಕೆಯ ಕಣ್ಣನೀರ ?
ಗರವಿಳಿಸ ಬಲ್ಲಿರಾ ಜೀವಿಸೆ ಕುಮಾರ ?
ಅರಸೇನಗೈಯನಿಂದಣುಗನೆದ್ದು ಬರೆ
ವಿಷ ನೀಗುತುಸಿರಾಡಿ 'ಅಪ್ಪ' ಎಂದುಸಿರೆ !

ಉಪಾಸಿಪ್ರಧಾನ

ಅಂತೆಸಗ ಬಲ್ಲವೇ ಕಲ್ಪಗಳ ಬಲವೊಡ್ಡಿ ?

ನಕ್ಷತ್ರಕ

ದ್ರವ್ಯಗಳ ದೊರೆಯಿಂದ ಪಡೆಯೆ ಅದಕೇನಡ್ಡಿ ?
ಅರಸು ಮಸಣವ ಕಾವ ಯೋಗವಿದು ದುರ್ಲಭ
ಮಸಣರುದ್ರನನೊಲಿಸಲೀ ಕಲ್ಪದಿಂ ಸುಲಭ.
ಬೆಂತರಂಗಳ ರಾಜನಿನ್ನು ನಿಮ್ಮನು ನಗ
ನಿಮ್ಮಿಂದ ಮೃತ್ಯುವನೆ ದಾಟುವನು ದೊರೆಮಗ.

ಕೋರಿದುದು ಫಲಿಸುವುದು, ಹುಸಿಯದೈ ನಿಮ್ಮೆಣಿಕೆ
ಈಗ ಸಲದಿರೆ ನಿಮಗೆ ಮುನ್ನಾಗದೀ ಗಳಿಕೆ.
ನಿಮಗಪ್ಪುದೈ ಕೇಡ ಕೊಂಕ ತಿದ್ದುವ ಜಾಣ್ಮೆ
ಲೋಕವೆಲ್ಲವು ನಿಮ್ಮ ಪೂಜಿಸುವ ಬಲು ಮೇಲ್ಮೆ.
ದುಸ್ಸತ್ತ್ವದೊಳು ನಿಮ್ಮ ಸೆಣಸಿಕೆಯ ಋಷಿ ಬಲ್ಲ
ಶಿವನ ಜಗದೊಳು ಹರಡೆ ನಿಮ್ಮಳವನೂ ಬಲ್ಲ.
ಅದಕೆ ಬಳಿತೋರಿಹನು ನನ್ನ ನೆವದೊಳು ನಿಮಗೆ
ವಿಧಿಯರಿತು ಹವನಿಸಲು ವಶಕೆ ಬಹನಾ ಹಗೆ.
ದೊರೆ ನಿಮಿತ್ತನು ಇದಕೆ; ಹರಿಯಲತ್ತೆಡೆ ದಿಟ್ಟ.
ಕೂಗಳತೆಯೊಳೆ ಇಹನು, ಅದುವೆ ಆತನ ಹಟ್ಟ
ತನ್ನ ಕೇಡಳಿವಿಗೆನೆ ಲೋಕಕಲ್ಯಾಣಕೆನೆ
ಮುನಿಗಪ್ಪನಿತ್ತವನು ಹೆಣದಕ್ಕಿಯಿಯನೇ ?

ಉಪಾಸಿಗಳು

ಕೊಡುಮನ ತಹೆವಾ ಕೊಡುಗೈದೊರೆಗೆ
ತಡೆಯಿಕ್ಕುವೆವೈ ಕೇಡಿನ ಪಡೆಗೆ.
ಪಟ್ಟಪಾಡು ಸಾಕೀ ಸಾಹಸಿಗೆ
ಬೆಂತರಕಿನ್ನಾಗದು ಕೇಡೆಸಗೆ !

**ನಕ್ಷತ್ರಕ**

ಹೋ ! ಎನ್ನಿರಿ ; ಭೋ ! ಎನ್ನಿರಿ ; ಕೋರಿರಿ.
ಭೋರಿಡುತಿರುವಶಿವಂಗಳ ತೋರಿರಿ
ನಿಮಗಪ್ಪುದು ಮುನಿಕೃಪೆಯಿಂ ವಿಶದ
ಮುಂಬಹುದೆಲ್ಲವು, ಅವ ಶಮಿಪ ಹದ.

## ಸಂಜೆಯಿರುಳು

(ಕಾಶೀನಗರದ ಶ್ಮಶಾನದಲ್ಲಿ ತನ್ನ ವಾಟಿಯ ಮುಂದೆ ಚಂಡಾಲನ ವೇಷದಲ್ಲಿ ಹರಿಶ್ಚಂದ್ರ ಕಾಣಿಸಿಕೊಳ್ಳುತ್ತಾನೆ.)

### ಹರಿಶ್ಚಂದ್ರ

ಇದು ರುದ್ರಭೂಮಿ, ಜೀವನ ಜಲನಿಧಿಯೆಲ್ಲೆ
ಇದರಂಚೊಳು ಹಗಲಿರುಳೂ ಕಾದಿಹೆನಿಲ್ಲೆ
ಬಾಳುತ್ತಿಹೆನನ್ನವನುಂಡುಣ್ಣದ ಹೆಣದ
ದಿನದಿನವೆನಗೀ ಶವಗಳ ಲೆಕ್ಕವೆ ಬಿನದ
ಹೊಳಲಿನ ಬಾಳಲೆಯಲೆಯಂತಿಲ್ಲಿಗೆ ಬಡಿದು
ಮರುಳುತ್ತಿದೆ ತನುತನುಗಳನೀ ದಡಕೆಸೆದು
ಈ ಬಳಕೆಯೊಳೂ ಬತ್ತದು ಇದರಾಶ್ಚರ್ಯ
ಇಂತಸು ಭೂತವ ಭುಂಜಿಸಿ ಬಿಸುಡುವ ಕಾರ್ಯ
ಕಾಣದ ಕಣ್ ಕೇಳದ ಕಿವಿ ನುಡಿಯದ ಬಾಯಿ
ನಿಶ್ಚಲವಾದಂಗಗಳೀ ಚಿತಿಕಾಶಾಯಿ
ವಿಸ್ಮಯವನು ತರುವನಲ ಧ್ಯಾನಿಪ ಬಗೆಗೆ
ಪ್ರೇಮಿಪರಾರ್ ಕಾಮಿಪರಾರ್ ಹಗೆ ಯಾರಿವಗೆ ?
ನಿದ್ರಿಸುವೊಲೆ ಇವನಿದ್ದರು ನಿದ್ರೆಯಿದಲ್ಲ
ತಾಯಿಯ ತೆರದಾತ್ಮದ ಕಾಪೀ ಮೈಗಿಲ್ಲ
ಮುದರೋದನಗಳ ತೆರೆ ಭವಜಲಧಿಯೊಳೇಳೆ
ನೋಡದೊ ಧಾವಿಸುತಿರುವೀ ಆತ್ಮಕೆ ನಾಳೆ
ಎಲ್ಲಹುದಾವಾಲಿಂಗನ ಚುಂಬನದೊಳಗೆ
ಈ ವೇಗಕೆ ನಡೆ ತಡೆ ? ನಿಲುಗಡೆ ಎಲ್ಲಿವಗೆ ?
ಭೂತಕೆ ಭೂತಕೆ ಹಂಚಿಕೆ ಈ ಮೈ ಇನ್ನು
ಇದರಾಸರೆ ತೃಷೆಗಳಿಗೇಗತಿ ಮುನ್ನು ?
ಇಂತಾವುದೊ ಸತ್ತೃಷ್ಣೆಗೆ ಆಕರನಾಗಿ
ಸದ್ವಂಶದಿ ಬಾಳಾಂತೆನು ನಾನರಸಾಗಿ
ಈ ಜೀವಿತದಾಂತರ್ಯದಿ ವಿಧಿಮಹದಿಚ್ಛೆ
ವರ್ಶಿಪುದಾವುದೊ ಧರ್ಮರಹಸ್ಯವ ಬಿಚ್ಚೆ.

ಅವಶನಾಗಿ ನಡೆಸುತ್ತಿಹೆ ನಾನದನಿಂದು
ಇದರನುವರ್ತನೆಯಿಲ್ಲದೆ ಇಲ್ಲವು ಮುಂದು.
ಸತಿಯೆಲ್ಲೋ ಸುತನೆಲ್ಲೋ ರಾಜ್ಯವದೆಲ್ಲೋ
ಗುರುಜನ ಪರಿಜನರೆಲ್ಲೋ ನೇಹಿಗರೆಲ್ಲೋ
ಬೆಳ್ಗೊಡೆ ಚಾಮರ ವಾಹನ ವೈಭವವೆಲ್ಲೋ
ಬರುವೆಡೆ ಹೋಹೆಡೆ ಸಂಭ್ರಮಿಸುವ ಜನವೆಲ್ಲೋ !

ಏರೇರುತ್ತಿರುವೊಲೆ ಮನವಪ್ಪೊಡೆ ಹಗುರ
ಮಮಕಾರವ ನೀಗುತ ಮೆರೆದಾತ್ಮದ ಹೊಗರ
ಏರಿಕೆಯೊಳೆ ನೆಲೆಯದಕಲ್ಲದೆ ಬೀಳುಂಟೆ ?
ಏರುವ ಹಮ್ಮದದೊಳು ಬೀಳದ ಬಾಳುಂಟೆ ?
ಯಾಗಾಂತ್ಯದೊಳೆನ್ನಾವರಿಸಿತು ತ್ಯಾಗಮದ
ಕೊಡಬಲ್ಲೆನು ಬೇಡಿದುದೆಲ್ಲವನೆಂಬ ಮದ.
ಬಯಕೆಯ ಮಿತಿಯನೆ ಮೀರಿದ ಸಿರಿಯಿದ ನೋಡ
ಅರ್ಥಿಗಳಿಹರೇ ಹೊಣರಲು ದಾನಿಯ ಕೂಡ
ಎಂದಿರಲೈತಂದನು ವಿಧಿಚೋದಿತನಾಗಿ
'ನಾ ಕೋರುವ ಧನವನು ಕೊಡಬಲ್ಲೆಯ ಚಾಗಿ ?'
ಎನ್ನುತ ಸನ್ನುತ ವಿಶ್ವಾಮಿತ್ರಂ ಸಭೆಗೆ ;
ಬೆಚ್ಚಿತು ಮನವೀ ಬರವಿಗೆ ಈ ಬೇಡಿಕೆಗೆ.
ಇಲ್ಲೆನೆ ನಾಲಗೆ ಬಾರದೆ ಆ ನೆರವಿಯೊಳು
'ದಕ್ಷಿಣೆಯೇ ? ಕೋ, ಕೊಟ್ಟೆನು !' ಎಂದಾನೆನಲು
ಸರ್ವಸ್ವವನೂ ಕೊಟ್ಟರು ಋಣಿಯುಪ್ಪ ತೆರ
ಧನರಾಶಿಯ ಬೇಡಿದನಲ ಗಾಧಿಯಕುವರ.
ಕೊಡುವೆನು, ಕೋ, ಲೇಸೆಂದೆಯೆ ವಚನವ ಕೊಟ್ಟೆ ;
ಕೋಶವ ದೇಶವ ಕೊಟ್ಟೆ ರಾಜ್ಯವ ಬಿಟ್ಟೆ
ಸತಿಸುತರನೆ ಮಾರಿದೆ ಸಾಲವ ಹರಿಸೆ
ಮತಿಮಾಡಿದೆ ಚಂಡಾಲನ ದಾಸ್ಯವ ವರಿಸೆ.
ಅರಿಷಡ್ವರ್ಗವ ನಾ ಗೆದ್ದವನಲ್ಲ
ಧರ್ಮದ ಹಟವಿಲ್ಲ, ಸತ್ಯದ ಹುರುಡಿಲ್ಲ.
ಸುತಮೋಹದಿ ವರುಣನ ವಂಚಿಸಿ ರುಜೆಗಾದೆ,
ಎನ್ನಿಂ ವಿಪ್ರತನೂದ್ಭವಗಾಯಿತು ಬಾಧೆ.

ಆದೊಡೆ ಇಂದೇಕಾ ಶವಸಿಗೆ ನುಡಿಗೊಟ್ಟೆ ?
ಕೊಟ್ಟರು ಅದ ಪಾಲಿಸಲೀ ತೆರ ಛಲತೊಟ್ಟೆ ?
ಇದರೊಳಗುಟ್ಟೇನೆಂದಾನಚ್ಚರಿಗೊಳುವೆ
ಎನ್ನೀ ಪ್ರಕ್ಷೇಪಣೆಕಾವೆಡೆ ನಿಲುವೆನುವೆ :
ಅತಿಶಯ ವಿಭವೋನ್ನತಿಯಿಂ ದೀನತೆಗೆ
ಅಸದೃಶ ಸಂಸೃತಿ ಸುಖದಿಂ ವಿಷಮತೆಗೆ
ಆ ದೊರೆತನದಿಂದೀ ಅಂತ್ಯಜನಾಳ್ತನಕೆ
ಆ ಅರಮನೆಯಿಂದೀ ಪ್ರೇತನಿಕೇತನಕೆ.

ಅಲ್ಲಗೊ ಕಾಶೀನಗರಿಯು ಮೃಗಜಲದಂತೆ
ಬಗೆ ಬಗೆ ಜೀವನಮಾಯೆಯ ಮೆರೆದಪುದಿಂತೆ
ನನ್ನಂತೆಯೆ ಪ್ರಭುನಾಮುಕನಿರುತಿಹನಲ್ಲಿ
ಪ್ರಜೆಯೂ ಇದೆ ನಾನಾಸಂವೇದನೆಯಲ್ಲಿ
ಅದನಿದು ಇದನದು ಚೋದಿಸಿ ಜಂಗಮವಾಗಿ
ಬಗೆಬಗೆ ರಾಗದಿ ತೂಗಿ ದ್ವೇಷದಿ ತಾಗಿ,
ಸ್ಥಾವರವಾಗಿ, ಈ ಎಡೆ ಎಲ್ಲವ ನೀಗಿ
ಪ್ರಶಾಂತಿಯೈದುತಲಾಗುತಲವಶತ್ಯಾಗಿ !

ದಿನದಿನ ನಿಟ್ಟಿಸುತಿಹೆನಿಲ್ಲಿಂದಿದ ಅದನು
ಈ ತ್ಯಾಗವ ಆ ಭೋಗವ—ಏನೀ ಹದನು ?
ಎನಿತಾಕರ್ಷಕ ಮೋಹಕ ಅಲ್ಲಾ ಇರವು !
ಆದೊಡೆ ಅನಿತ್ಯ ಅಸತ್ಯ ಇಲ್ಲಿಂದದುವು.
ಈ ಎಡೆ ಈ ಹೆಣಸುಡುವಗ್ನಿ ಮತ್ತಾನು,
ಇಬ್ಬರೆ ಸತ್ಯರು ನಿತ್ಯರು !—ಹಾ ಇನ್ನೇನು?
ನಿರ್ ಘೃಣವಿಪ್ರನ ಮನೆಯೊಳು ದುಡಿಯುವ ಸತಿಯೋ
ತಾಯಿದಿರೇ ತಿರಿದಳಲುವ ಎಳೆಯನ ಗತಿಯೋ ?
ಆ ಇಬ್ಬರ ಜೀವಿತವೀ ತೋರಿಕೆ ಜಗದಿ
ಸತ್ಯಕು ಸತ್ಯವು ಎನಿಸಿದೆ ನನ್ನನುಭವದಿ.
ಇಲ್ಲೇಪರಿ ಅಲ್ಲಿಯು ಎನ್ನೆದೆ ಮಿಡಿಯುತಿದೆ
ಮಮತಾದೇಹದೊಳನುಭಾವಿಸಿ ತುಡಿಯುತಿದೆ.

(ಹಿಂಡೆಗೊಳುಳ್ಳುವ ಮುಸಣಿಗನ ಪ್ರವೇಶ)

ಮುಸಣಿಗ

ಶರಶರಣೆಂಬೆನು ಹರಿಚಂದಪ್ಪ
ಅಗೊ ಅಗೊ ನೋಡಾ ಹೆಣಗಳ ಒಪ್ಪ.
ಸುಡುಗಾಡಿಗು ಸಿರಿವಂತರೆ ಇಷ್ಟ
ಸಾಕಪ್ಪಾ ಬಡಹೆಣಗಳ ಕಷ್ಟ
ಶಾಲಿಗಿಂತಲೂ ಗೋಳೇ ಹೆಚ್ಚು
ಹೆಣದಕ್ಕಿಯೊ ಹಿಡಿಯಾದರು ನುಚ್ಚು
ಸಿದಿಗೆಗು ಚಿಂದಿ ಹೆಣಕೂ ಚಿಂದಿ
ಅರೆಬೇವಿಗೆ ಚಿತೆ ಹೋಹುದು ನಂದಿ
ಮುಸಣದ ಬಾಡಿಗೆಗೂ ದಮ್ಮಯ್ಯ
ಅಣ್ಣಾ, ನನ್ನಪ್ಪ, ನನ್ನಯ್ಯ.
ಆದೊಡೆ ಸಿರಿವಂತರ ಬಗೆ ಬೇರೆ
ಅವರಿಗೆ ಸಾವಿನೊಳೂ ಜೋರೆ !
ಹೆಡಿಗೆ ಹೆಡಿಗೆ ಹೆಣದಕ್ಕಿಯನಿಕ್ಕಿ
ಚಟ್ಟಕೆ ಪೀತಾಂಬರಗಳ ಸೆಕ್ಕಿ
ಹಿಡಿ ಹಿಡಿ ನಾಣ್ಯವ ಬೀದಿಗೆ ಎರಚಿ
ಬಾಜ ಬಜಂತ್ರಿಯ ಜತೆಗೂ ಕಿರಿಚಿ
ಬರುತಿಹ ನೆಂಟರ ನಿರ್ಲಕ್ಷಿಸುತ
ಬರಲೊಲ್ಲೆನೆಂದೆ ತಲೆಯಾಡಿಸುತ
ಬರುವವು ಸಿರಿಹೆಣ ಮೆರವಣಿಗೆಯೊಳು
ಬೆಂಕಿಯ ತಬ್ಬಲು ಬಲುಸಲಿಗೆಯೊಳು !
ಸೈ ಎನ್ನಿಪುದೀ ಸಾವರ ಜಂಬ
ಹಿಂಡೆಗೊಳಾಳು ನನಗೂ ತುಂಬ.
ಸತ್ತರೆ ಇಂಥರು ಸಾಯಲು ಬೇಕು !
ಪಾಡಿನ ಬಡಹೆಣಗಳು ಸಾಕು

ಹರಿಶ್ಚಂದ್ರ

ಮುಸಣಿಗ, ಲೇಸೈ ನಿನಗೀ ಮುರುಕ
ಬಡ ಸಿರಿತನಗಳು ಬದುಕಿನ ಕುಹಕ

ಅಂಥವರೋ ಇಂಥವರೋ ಎಲ್ಲರು ಮಸಣಕೆ ಒಂದೇ
ಎಂಥವರಾದರು ಇಲ್ಲಿಗೆ ಬರುವರು ಬಂದೇ
ಇಲ್ಲಿಗೆ ಬಹರಿಗೆ ಮರುಗಿ ಮರುಗಿ ಮುಗಿವುದೇ
ಇಲ್ಲಿನ ಅಳಲಿಗೆ ಕೊರಗಿ ಮುಗಿವುದೇ ?
ಏಕೆ ಕೆಳೆಯ ಮಾತಿಲ್ಲದೆ ನಿಂತೆ ?

**ಮಸಣಿಗ**

ಇಂದೆನಗಾ ಬಡಹೆಣ್ಣಿನ ಚಿಂತೆ
ಕಾಸಿಗು ಗತಿಯಿಲ್ಲದ ಕಡುಬಡವೆ
ಆಕೆಯ ಪಾಡನು ನಾನೆಂತೊರೆವೆ
ತನ್ನ ಕಂದನನು ತಾನೇ ಹೊತ್ತು
ಮಸಣವೆ ಕಂಬನಿಗರೆವೊಲು ಅತ್ತು
ಕೇಳುವರೆದೆಗಳ ಮರುಕದಿ ತೋಯಿಸಿ
ತನ್ನೆದೆ ಬೆಂಕಿಯೊಳೆಲ್ಲರ ಹಾಯಿಸಿ
ಬಂದಿಹಳವಳು ಮಸಣದ ಕಟ್ಟೆಗೆ
ಸುಂಕ ತೆರದೆ ಸುಡುಗಾಡಿನ ಬಿಟ್ಟಗೆ

**ಹರಿಶ್ಚಂದ್ರ**

ಮರುಕದೊಳಾಕೆಯನೊಳಗೆ ಬಿಟ್ಟೆಯಾ ?

**ಮಸಣಿಗ**

ಇಲ್ಲಿಲ್ಲಪ್ಪ, ನಾ ಬಿಡಲಿಲ್ಲ
ಗಡಿಯೊಳಗೆಯೆ ಕಾಲಿಡಗೊಡಲಿಲ್ಲ
ಆಕೆಯ ಹೊರಗಿರಿಸಿಯೆ ಬಂದೆ.
ಇದರೊಳು ನಿನ್ನಪ್ಪಣೆ ಏನೆಂದೆ ?

**ಹರಿಶ್ಚಂದ್ರ**

ತೆರ ತೆರದಿರೆ ಮಸಣವು ತೆರವಿಲ್ಲ !

**ಮಸಣಿಗ**

ಇದ ನಾನರಿಯೆನೆ ಹರಿಚಂದಪ್ಪ ?
ಆದರೆ ! . . .

ಹರಿಶ್ಚಂದ್ರ

ಆದರೆ ?

ಮಸಣಿಗ

ದೊರೆ ಕುಮಾರನೆಂಬಂತಿಹ ಬಾಲ
ನೋಡಲಾರೆ ನಾನಾಕೆಯ ಗೋಳ
ಅಯ್ಯೋ ಎನ್ನುವರಿಲ್ಲದೆ ಅಳುತ
ಒಡಲೊಳು ಹೊತ್ತುದ ಹೆಗಲೊಳು ಹೊರುತ
ಬಂದಿಹಳೈ ಸುಡುಗಾಡನು ಬೇಡಿ
ಬೇಡೆ ಕಳುಹಿದಳು ಮಸಣದ ಸೋಡಿ.

ಹರಿಶ್ಚಂದ್ರ

ಮರುಕವೊಳ್ಳೆಯದು ಮಸಣವ ಕಾವಗೆ
ಅತಿಯಾದೊಡೆ ಅದು ಅದೆ ಆತಗೆ ಹಗೆ.

ಮಸಣಿಗ

ಮರುಗೆ ನಾನು ನನ್ನಂಥರ ಗೋಳಿಗೆ
ಉತ್ತಮಳೀಕೆ — ಈ ಹದ ಬೇರೆ
ಇಂಥವರಳನು ತಾಳಲೆ ಆರೆ.

ಹರಿಶ್ಚಂದ್ರ

ಶಿಸ್ತು ಸಡಿಲೆ ಸಾಕೊಂದು ವಿನಾಯಿತಿ
ಈ ನಗರದಿ ಬಡವರಿಗಿಲ್ಲ ಮಿತಿ.
ವೀರಬಾಹುಕಗೆ ನಾನೋ ತೊತ್ತು
ಮಸಣದ ಬಾಡಿಗೆ ಆತನ ಸ್ವತ್ತು
ಅದ ಕೊಳ್ಳದೆ ಬಿಡೆ ಹುಸಿವೆನಾತಗೆ
ಇದ ಮನಗಾಣುತ ನಡೆ ನಿನ್ನೆಡೆಗೆ.

ಮಸಣಿಗ

ಅಹುದಹುದಯ್ಯ, ಮರೆತಿದ್ದೆನದ.
ಆದರೆ . . . . .

ಹರಿಶ್ಚಂದ್ರ

ಸಾಕು ಸಾಕು ನಿನ್ನಾದರ ಸಾಕು
ತೆರುವ ತೆರವನೆಲ್ಲರು ತೆರಬೇಕು
ಆಕೆಗರುಹು ಪೋ——ಕಜ್ಜವುಂಟೆನಗೆ
ಒಕ್ಕಣಿಸಬೇಕು ಲೆಕ್ಕವ ದಣಿಗೆ.

(ಹಟ್ಟಿಯೊಳಕ್ಕೆ ಹೋಗುವನು)

ಮಸಣಿಗ

ಆಕೆಗೆ ಮೊಗದೋರುವುದೆಂತಪ್ಪ ?
ಕಲ್ಲೆದೆಯುವನೀ ಹರಿಚಂದಪ್ಪ.
ರಾಣಿಯಂತಿಹಳು ಶಡೆವೆನದೆಂತು ?
ಕಳಿಸುವೆನವಳನೆ ಹೆಣದೆಡೆ ನಿಂತು.
ಓವೊ ಬಂದರು ಮಸಣದ್ಯೆಗಳು
ಇವರನೆ ಕೋರಲಿ ಕರ್ಮಕೆ ಅವಳು
ನಡುಗುವುದೆನ್ನೆದೆ ಮುನಿಗಳ ಕಂಡು
ಉಡುಗಿಯೆ ಹೋಹುದು ದೈಯದ ದಂಡು !

(ಹೋಗುವನು)

(ಶ್ಮಶಾನ ರುದ್ರೋಪಾಸಿಗಳು ಹಾಡುತ್ತಾ ಪ್ರವೇಶಿಸುವರು)

ಉಪಾಸಿಗಳು

೧

ಮೂಕಾಸುರ ಶೋಕಾಕುಲ
ನಾಗಲು ಪದತಲದಿ
ಲೋಕ ವಿಶೋಕವಿಪಾಕಕೆ
ಬರೆ, ತಾಂಡವದಿ
ಮನ ನೆಟ್ಟಿಹ ಅಶಿವಂಗಳ
ಮೆಟ್ಟಿಹ ಶಿವಗೆ

೨

ಭರ್ಗಗೆ ದೀಪ್ತನಿಸರ್ಗಗೆ
ಸರ್ಗೋತ್ತರ ಲಯಗೆ
ದುರ್ಗಮಮಾರ್ಗಗೆ ರುದ್ರಗೆ
ದುರ್ಗತಬಾಂಧವಗೆ
ಗರ್ಜನತರ್ಜಿತ ಶಮನಗೆ
ಸ್ಫೂರ್ಜದ್ಬಾಹುವಿಗೆ
ಊರ್ಜಸ್ವಿಗೆ ಜಯವೆಂಬೆವು
ನಮವೆಂಬೆವು ಶಿವಗೆ !

**ಉಪಾಸಿಪ್ರಧಾನ**

ಓವೋ ಇನಕುಲದರಸೇ ಮಸಣವ ಕಾವಾಳೀ,
ಹೊರಬಾರೈ, ಮೊಗದೋರೈ ನಮ್ಮರಕೆಯು ಕೇಳಿ.
ನನ್ನಿಗೆ ನಿಲೆ ಸಕಲವನೂ ತೆತ್ತಿಹ, ಓ ಧೀರ
ರಿಸಿಯನೆ ತಣಿಯಿಸಿದವನೇ ತ್ಯಾಗದ ಶೌಂಡೀರ !
ಹೊರಬಾರೈ, ಹರಕೆಯ ಸೂಡಾವೊಲಿದೀವುದಿದ
ಪೃಥ್ವಿಯೊಳೆಲ್ಲೂ ದೊರೆಯನು ಮಾನಿಸ ನಿನ್ನ ಹದ.

**ಹರಿಶ್ಚಂದ್ರ**

ಕಾಲದ ಪದಪದರ ತೆರೆದು ಹೊಲೆಬಾಳಿನ ನರನೊಳು
ಎಂದೊ ಸಂದ ಅರಸುತನದ ಸಿರಿಬಾಳನು ಕಾಂಬವರೇ,
ಶರಣು ಶರಣು ತವಸಿಗಳೇ
ಕರೆದಿರೇಕೆ ದಾಸನ
ತಾವಡಿಯಿಡೆ ಪಾವನವಾ.
ಯ್ತೀ ಪ್ರೇತವೇಶನ.

**ಉಪಾಸಿಪ್ರಧಾನ**

ತಾಂಡವಿಸುತಲಿಹವು ದುಷ್ಟಶಕ್ತಿಗಳೀ ಹಳುವೊಳು
ವಿಧಿಯ ಬಲ್ಲಿವದನು ದಮಿಸೆ ಸಿಲಿಸಲೆಮ್ಮ ವಶದೊಳು
ಕುತ್ಸಿತ ದಾಸ್ಯದೊಳಂತಸ್ಸತ್ತ್ವವ ಕಾಪಿಡುವಾಳೀ !

ಬೆರಗುಗೊಳಿಸುತಿಹುದೆಮ್ಮನು ನಿನ್ನಿಂದಿನ ಹೊಲೆಬಾಳೇ.
ಅಂತಶ್ಶಿವ ಬಾಹ್ಯಾಶಿವ ನೀ ಕೊಡುಗೈದೊರೆ, ಬಲ್ಲೆ
ಭೂತೇಜ್ಯೆಗೆ ಹೆಣದಕ್ಕಿಯ ಯಾಚಿಪೆವೆನ್ನದಿರೊಲ್ಲೆ.

ಹರಿಶ್ಚಂದ್ರ

ಮೂರುಕಾಲವರಿತ ತಮಗೆ ಹೊರತಾವುದು, ಆವುದು ಮರೆ ?
ಹದುಳಗೆಡಿಸುವಶುಭಂಗಳು ತಮ್ಮ ತಪಶ್ಶಕ್ತಿಗಿದಿರೆ ?
ತಾವೀ ನಿಷ್ಕಿಂಚನನಿಂದೇನಂ ಬೇಡಲುಬಹುದು ?
ಇಂದಿನ ನನ್ನೀಗತಿಗೂ ದುರ್ಗತಿ ಮತ್ತೇನಿಹುದು ?
'ಕೋ,' ಎಂದೆನ್ನಯ ಮಾತನೆ ಕಸಿದನಲಾ ಗಾಧೇಯ.
ನನಗೊಪ್ಪಿಡಿ ಕೂಳಲ್ಲದೆ ಇಲ್ಲವು ದಾಸ್ಯಾದಾಯ.
—ಮಾರಿಸಿಗಳೆ, ಬಾಯ್ಕಟ್ಟಿದೆ ಈ ನುಡಿಯನು ನುಡಿಯೆ
ಆದೊಡೆ ನಿರುಪಾಯಂ ನಾ ಗತ್ಯಂತರವರಿಯೆ—
ಆ ಹಿಡಿಕೂಳನು ಕೊಡಲಾಗದು ಬೇಕದು ಪೋಷಣೆಗೆ
ಕೊಂಡಾ ದಣಿಗಾದೀ ವ್ಯೈ ತಕ್ಕುದಲ್ಲ ಶೋಷಣೆಗೆ.

ಉಪಾಸಿಪ್ರಧಾನ

ಅಮಂಗಳದ ಪರಿಹಾರಕೆ ಅತ್ಯವಶ್ಯ ಭೂತಬಲಿ

ಹರಿಶ್ಚಂದ್ರ

ತಾಳಲಾರೆ ಪರರೊಡವೆಯ ದಾನಗೈದೆನೆಂಬ ಪಳಿ

ಉಪಾಸಿಗಳು

ನಿನ್ನ ಗೆಯ್ಮೆ ಯಾವ್ರದನೂ ವೀರಬಾಹು ಪ್ರಶ್ನಿಸನು

ಹರಿಶ್ಚಂದ್ರ

ಅಂಥ ದಣಿಯ ವಂಚಿಸುವೊಡೆ ಅಧಮಾಧಮನೆನಿಸುವೆನು

ಉಪಾಸಿಪ್ರಧಾನ

ಹರಿವ ಕೇಡು ಈಭಲದಿಂದನಿವಾರ್ಯಕೆ ಸಲಬಹುದು

ಹರಿಶ್ಚಂದ್ರ

ನಿಯತಿಯಿಚ್ಛೆ ಅಂತಿರುವೊಡೆ ಅದ ಮರಳಿಸಲಾರ್ಗಹುದು ?

ಉಪಾಸಿಪ್ರಧಾನ

ಮಂಗಳವಹುದಿದರಿಂದೀ ನಾಡಿಗು ದೊರೆಗೂ ನಿನಗೂ

ಹರಿಶ್ಚಂದ್ರ

ಆದೊಡೆ ಪರಧನಹರಣದ ಪಾತಕ ನನಗೂ ತಮಗೂ !

ಉಪಾಸಿಪ್ರಧಾನ

ಮಹದಾಶಯ ವಿರೆ ಕೊಡುವಗು ಬೇಡುವಗೂ ಹೊಲೆಯಹುದೇ ?

ಹರಿಶ್ಚಂದ್ರ

ಅಯ್ಯಾ ! ನಿಷ್ಠೆ ಇದೊಂದೇ ಉಳಿದಿದೆ ; ಅದ ಯಾಚಿಪುದೇ ?

ಉಪಾಸಿಗಳು

ಆಹಾ !
ಅರಸು ಮಸಣವ ಕಾವ ಬೆರಗಿನ ಶವದ್ರವ್ಯವೆ ಕರ್ಮಕೆ
ಲೇಸೆನಲು ಅದನೀಯೆ ಕುಂದುಹುದೀ ಮಹೀಪನ ಧರ್ಮಕೆ.
ದೊರೆಯುದಿರಲೀ ಶಾಂತಿ ಸಲ್ಲದೆ ಕೇಡುಗಳು ಬಳಿಯಿಡುವುವು
ಕಂಡ ಕೇಡನು ತಡೆಯಲಾಗದ ದುರ್ಬಲರನವು ನಗುವುವು.

ಅದ್ಯದೆಡಬಲದೊತ್ತಿನೊಳಗಿಹ ಭೂತಭವಿತವ್ಯತೆಗಳ
ದೀಪ್ತಚಿತ್ತೋನ್ನತರು ಕಾಣುತ ಸುಮ್ಮನಿರೆ ತಪ ನಿಷ್ಫಲ.
ದಾನಫಲದಿಂದಿಂಥ ಕೃಪಣಸ್ಥಿತಿಗೆ ಸಂದೀ ಅರಸಗೆ
ಸತ್ಯಕಾಷ್ಠಾಲಂಬ ಸಾಕೇ ಆಪದಂಬುಧಿ ತರಣಗೆ ?
ಆಹತರ ಘಾತಿಸುವ ರೂಢಿಯ ವಿಪದವೀಶನ ಬಾಳೊಳು
ದುಃಖದಾವರ್ತಗಳನೆಬ್ಬಿಸುತೀ ಹೊಳಲನಾಕ್ರಮಿಪ್ಪೊಲು
ಇಂದೆಮಗೆ ಮನವರಿಕೆಯಾಗಿದೆ, ಹೃದಯ ಹದುಳವ ತೊರೆದಿದೆ
ಫಲಕೆ ಫಲವನೆ ಪಣವನೊಡ್ಡುತ ದೈವ ದಾಳವನೆಸೆದಿದೆ.

ಹರಿಶ್ಚಂದ್ರ

ವಿಚಿತ್ರ ಕರ್ಮದ ವಿಚಿತ್ರವಿಧಿಗಳ ತವಸಿಗಳೇ
ಭವಿಷ್ಯತೋರುವ ರಹಸ್ಯವಾವುದನರಿತಿಹಿರೈ ?
ವಿಪತ್ತದಾವುದು ಪರಾಕು ಎನುತಿದೆ ನಿಮ್ಮೊಳಗೆ ?
ನಿದಾನವರಿತರು ವಿಧಾನವಿಲ್ಲದೆ ಪರಿತಪಿಸೆ ?

ಅಪೂರ್ವದರ್ಶನರಭೂತಪೂರ್ವದ ಭೀತಿಯನು
ವಿಧಾತಹತಕನ ವಿಷಾದ ಹೆಚ್ಚಲು ತಂದಿಹಿರೈ
ಅಸಂಗಿಗಳಿಗೀ ಪ್ರಸಂಗವೇತಕೊ ನಾನರಿಯೆ
ಅಭಾಗ್ಯಭಾಗ್ಯನು ಕುತೂಹಲಾಸ್ಪದನೆಂತಾದೆ ?

ಪವಿತ್ರವಂಶಕೆ ಕಳಂಕನಪ್ಪೆನೆ ಋಣ ನಿಂತು ?
ಅಸತ್ಯದಪಯಶದಪುಣ್ಯನಾಮಕೆ ಸಲ್ಲುವೆನೇ ?
ವಿಘಾತವೆನ್ನಯ ಕುಟುಂಬಕೊದಗಿತೆ, ಪೇಳುವಿರಾ ?
ದುರೂಹಚಿಂತಾ ಪ್ರರೂಢವಾಗಿದೆ ಮಚ್ಚಿತ್ತ.

ಉಪಾಸಿಪ್ರಧಾನ

ದಿಟ, ನಮ್ಮಾಸಕ್ತಿಯ ಕೊಳ್ಳದು ಸಾಧಾರಣ ಮರ್ತ್ಯವ್ಯಾಪಾರ ;
ನೀನೊ, ಅಳುಕದೆ ದುರ್ಗಮಶ್ರೇಯಃಪಥದೊಳು ಚರಿಸುವ ಎದೆಗಾರ.
ನಿನ್ನಾತ್ಮದ ಬಲ ಹಿರಿದೈ, ಆದರಮಿತಾಕರ್ಷಣಶಕ್ತಿಗೆ ಸಂದು
ಅಭೌತಲೋಕವನಲೆಯುವ ಶಿವ-ಅಶಿವ ಪ್ರೇರಕಶಕ್ತಿಗಳಿಂದು
ಜೀವಾತ್ಮದ ಸುತ್ತಣ ಭಾವಶ್ವಸನದ ದುರ್ಗಂಧ ಸುಗಂಧಗಳಂತೆ
ನಿನ್ನೆಡೆ ಕೇಂದ್ರೀಕರಿಸಿವೆ, ನಿನ್ನೊಳು ನಾವು ಕುತೂಹಲಗೊಳುವಂತೆ
ಇಂದವು ಛಲಿಸುತ್ತಿಹವೈ ನಿನ್ನೀ ಸತ್ಯವ್ರತವನೆ ಪಣಮಾಡಿ
ಬಂದಿಹೆವದರಿಂ ಶುಭಪುಷ್ಟಿಗು ಅಶುಭದ ತುಷ್ಟಿಗು ಮನಮಾಡಿ
ಪ್ರಭೂತಹೋಮಕೆ ಹೆಣದಕ್ಕಿಯ ಚಟ್ಟದ ಬಟ್ಟೆಯ ಯಾಚಿಸಲು
ಈ ಭೂತೇಜ್ಯೆಯ ಫಲವನು ನಿನ್ನ ಪುರಾಕೃತಪುಣ್ಯಕೆ ಯೋಜಿಸಲು.

ಹರಿಶ್ಚಂದ್ರ

ನನ್ನನಕೃತ್ಯಕೆ ದೂಡುವಿರಾ ಸುಕೃತವ ಪಡೆಯೆ ?

ಹಂಸ್ಚಂದ್ರ

## ಉಪಾಸಿಗಳು

ಕುಲಮನಫಲವಾಂಛಿತಗಳು ಸಂಸ್ಕೃತಿ ಜತೆ ಸೇರಿ
ಕೃತ್ಯಾಕೃತ್ಯ ವಿವೇಚನೆ ಮನುಮನುಜಗು ಬೇರೆ.
ಇದು ಲೇಸಿದು ಕೇಡೆನ್ನುತ ಕರ್ಮದ ನಿಗಳದೊಳು
ಬಳಿಗಳ ಗುರುತಿಡಲಹುದೇ ಈ ಭವಬಂಧದೊಳು ?

ಆವುದು ವಿಷ ಆವುದಮೃತ ಇದನರಿತವರಾರು ?
ಇದು ಬೇಕೆನೆ ಅದುಬೇಡೆನೆ ನಿರ್ಣಯಿಸುವರಾರು ?
ಗಳಿಗಳಿಗೆಗು ಬದಲಪ್ಪುದು ಎಲ್ಲದರುಪಯೋಗ
ಸಕ್ತಿಜಿಹಾಸೆಗಳಿಲ್ಲದ ಬಗೆಯೇ ಶಿವಯೋಗ !

ಕೊರಲಿನ ಗರ ತನುನಾಗರ ಮುಖವೈಶ್ವಾನರನು
ಕರದೊಳು ತಲೆಯೋಡೆಡದೊಳು ಗೌರಿಯ ಲಲಿತ ತನು
ಜಡೆಯೊಳು ಸುಂದರಶಶಿಕಲೆ ಗಂಗೆಯ ಜಲಹಸಿತ
ಮೈಯೊಳು ಶವಭಸಿತ—ಶಿವಗಾವುದು ಹಿತ-ಅಹಿತ ?

ನಸು ವಿಷವೊಪ್ಪುದು ಭೇಷಜ ರೂಪದೊಳಸುವುಳಿಸೆ
ಚಿಂತಾಶೋಕದ ಮಿತಿಗಳು ನಲ್ಮೆಯ ರುಚಿ ಗಳಿಸೆ
ಧರ್ಮ ಅಧರ್ಮದ ದೋಹಳವಿಲ್ಲದೆ ಹುಲುಸುವುದೆ ?
ದ್ವಂದ್ವವಿರದ ಬದುಕಿಲ್ಲವು ಶಿವನಿರ್ಮಿತ ಜಗದೆ.

ಮೇಧ್ಯಾಮೇಧ್ಯದ ನಡುಗಡೆ ನಡೆಯುತ್ತಿದೆ ಪ್ರಾಣ
ಚಿಂತ್ಯಾಚಿಂತ್ಯದ ಮಧ್ಯದೊಳಾಡುತ್ತಿದೆ ಜ್ಞಾನ
ಸಹ್ಯಾಸಹ್ಯಗಳೊಳಗೆಯೆ ರಸದುಗಮಸ್ಥಾನ
ಧರ್ಮಾಧರ್ಮಗಳಂತರದೊಳೆ ಕ್ಷೇಮೋತ್ಥಾನ.

ನುಡಿಸಂದದಿ ನಡೆವಿಚ್ಛೆಗೆ ತುಸ ವಂಚನೆ ಬೆರಸಿ
ತನುಜನ ನೀನುಳಿಸಿದೆ ಪಿತೃಧರ್ಮವನನುಸರಿಸಿ.
ಈಗಳೊ ಆದ ಪ್ರಜೆಪೊರೆಯುವ ಧರ್ಮಕೆ ಹೊಂದಿಸದೆ
ನುಡಿದುದ ನಡೆಸುವ ಛಲಗೊಂಡೀ ದುರ್ಗತಿಗಿಳಿದೆ.

ಅಧರ್ಮಾಧಿಕೃತಿ ಸಲ್ಲದು ಎಲ್ಲಾ ಕಾಲದೊಳೂ
ಅದನುಚಿತದಿ ಸೇವಿಸುವೊಡೆ ಹರಿವುವು ಕೇಡುಗಳು.
ಅದರಿಂ ಕೊಡೆ ಮನಮಾಡೈ ಪ್ರೇತದ್ರವ್ಯಗಳ
ದಾನದ ಶಾಂತಿಯ ಫಲದಿಂ ಪಡೆ ಕಲ್ಯಾಣಗಳ.

## ಹರಿಶ್ಚಂದ್ರ

ಪೊಡಮಟ್ಟೊಡನೆಯೆ ಪ್ರೀತರು ಮನುಜಗೆ ದೇವಜನ
ನಲ್ಮನದೊಳು ಸಂಪೂಜಿಸೆ ಹರಿವುದು ದೈವ ಋಣ
ತಪೋಬಲದಿ ಜಗವಾಳುವ ಮನುಜರ ಕತೆ ಬೇರೆ
ಅವರ ಪರೀಕ್ಷೆಗೆ ನಿಲುವಗೆ ಮಾರ್ಗವು ಅಸಿಧಾರೆ.

ಮಿಕ್ಕವರಾರನು ಗಣಿಸದೆ ಚಂಡಾಲನ ಹಣಕೆ
ತುಷ್ಟನಾಗಿ ಮುನಿ ದೂಡಿದನೆನ್ನೀ ಆಳ್ತನಕೆ.
ಜಿಹಾಸ್ಯವೃತ್ತಿಯಕೊಂಡೆನು ಮನದೊಪ್ಪಿಗೆಯಿಂದ
ಹೊಲೆತನದೊಳು ಹೊಲೆಯಾಗದ ತೆರನುಳಿವುದೆ ಚಂದ

ಈಗಳದೇಕೊ ಅದೆಂತೋ ನನಗಾಗಿದೆ ಶ್ರದ್ಧೆ
ಸತ್ಯದೊಳದರಿಂ ನೆಮ್ಮದಿ,—ಅದು ಕೆಟ್ಟರೆ ಬಿದ್ದೆ.
ಅದ ಮಾರುತ ಶುಭಗಳ ಕೊಳೆ ಅವೆ ಹಳಸಿದೊಡೆಂತು ?
ನನ್ನಿಯ ಹದುಳವ ನೀಗಲು ನನಗೇಗತಿ ಮುಂತು ?

ಪೊರೆದಾ ಧರ್ಮವೆ ಪೊರೆವುದು ಎಂಬೀ ನಲ್ನುಡಿಗೆ
ಮನ್ನಣೆಯಿತ್ತೆನ್ನಯ ಮನ ನಿಂತಿಹುದೊನ್ನೆಲೆಗೆ.
ಎನ್ನಂ ಕಾಯಲದು—ಸತಿಸುತರಂ ಪೊರೆಗೆ
ನಮ್ಮಿಂದಿನ ಕೇಡಿಂದೆತ್ತಲಿ ಮಂಗಳದೆಡೆಗೆ.

ಅದರಿಂದೀ ಮುಂದೆನ್ನಯ ನನ್ನಿಗೆ ನಾನಾಗಿ
ಈ ದುರಿತದ ಬಾಳ್ನಡೆಯೊಳು ಮುಗ್ಗರಿಸದೆ ಸಾಗಿ
ಶಿವದ ನೆಲೆಯ ತಲಪುವವರೆಗೆನ್ನಯ ಬೆಂಬಳಿಗೆ
ದೈವದ ಕಾಪಿನ ತೆರದೊಳು ತಾವಿರೆ ಲೇಸೆನಗೆ.

ಇದಿಗೋ ಇರುಳೇರಿತು ನಿರ್ಜನವಾಯಿತು ಮಸಣ
ಕಳೆಗೊಂಡಗ್ನಿಗೆ ಕುಂದಿತು ಶವದಾಹವ್ಯಸನ.
ಗತಿಕೆಟ್ಟವರಿಗೆ ಚಿತೆಗಳ ಕಟ್ಟಿಗೆಯನು ಕಳಲು
ವೇಳೆಯಿದೇ—ಬೇಡುವೆನಪ್ಪಣೆ ಕಾವಲುಗೊಳಲು.

(ಹರಿಶ್ಚಂದ್ರ ನಮಸ್ಕರಿಸಿ ಶ್ಮಶಾನಯಾತ್ರೆಗೆ ಹೊರಡುತ್ತಾನೆ.)

### ರುದ್ರೋಪಾಸಿಗಳು

ಮರ್ತ್ಯಮಾನಸವತಿ ವಿಚಿತ್ರ
ಅದರ ಗತಿಗಿಲ್ಲೇಕಸೂತ್ರ!
ನನ್ನಿಗೀತೆರ ನಿಷ್ಠೆ—ಮಮತೆಗೊ
ಮಿದುವೆದೆಯ ಮಿತವಂಚನೆ.

ಶುಭಾಶುಭಗಳನೆಣಿಸುತೆಡಬಲ
ವೆಂದು ಶಂಕಿಸಿ ನಡೆವ ದುರ್ಬಲ
ಮತಿಗೆ ಹದುಳದ ದಾರಿ ತೋರ್ಪುದು
ಮಮತೆ—ಎಡರದು ನನ್ನಿಗೆ.

ಮನದೊಳಿರೆ ಸತಿಸುತರ ಹಂಬಲ
ಈತಗೇಪರಿ ನನ್ನಿ ಬೆಂಬಲ?
ಮಮತೆ ಹೊರಗಣ ದುಃಖವಾರಣ
ದುಃಖಕಾರಣ ಒಳಗಡೆ.

ಮಸಣದೊಳು ತನ್ನವರ ಕಾಂಬೊಡೆ
ಎಂಥ ನಿಲವೊಳಗಿವನ ನಿಲುಗಡೆ?
ಆವ ಶಿವದನುಭೂತಿಗಾಶಿಸಿ
ಧರ್ಮ ಆ ಪದವಿಟ್ಟಿತೋ.

ಎದೆಯ ಪಳಗಿಸೆ ತನ್ನ ನನ್ನಿಗೆ
ತೆರೆಯ ತೆಗೆವುದು ಒಮ್ಮೆಗೊಮ್ಮೆಗೆ
ನಿಷ್ಠೆ ನೇಹಗಳೊಂದೆ ಕಳದೊಳು
ಹೋರಾಡೆ, ವಿಧಿ, ಲೀಲೆಗೆ.

**ಚಂದ್ರಮತಿ (ಪ್ರವೇಶಿಸಿ)**

ಇಹನೇ ? ಇಲ್ಲಿಹನೇ ? ಎಲ್ಲಿಹನೀ ಮಸಣವ ಕಾವಾಳು ?
ಸುಡುಹಾಗವ ತೆತ್ತಲ್ಲದೆ ಸುಡಗೊಡದಾಳು ?
ಏನಿಲ್ಲದ ಕಡುಬಡವೆ
ನಾ, ಮಸಣದಿ ತಿರಿವೆ
ಹಸುಳೆಯನೊಂಟಿಗೆ ಬಿಟ್ಟು
ದೆಸೆಗೆಟ್ಟು.

ಅಲ್ಲಿಂದಿಲ್ಲಿಂದಾಯ್ದನು ಕಟ್ಟಿಗೆಗಳ ಜತೆಗೆ
ದೊರೆಕುವರನ ಚಿತೆಗೆ
ಕಣ್ ಕಿವಿ ಬಾಯುಳ್ಳಾತನು ಮೌನದೊಳೊರಗೆ
ಹಾ ಎನದ ಬಗೆ
ಬಸಿರೊಳು ಮಾಸಂದುಳಿಯಲು ತಾ ಹೊರಗಾದವೊಲೆ
ಧರೆಗಾ ಮೈ ಹೊಲೆಯುಳಿಸುತ ಹೋದನು ಹಸುಳೆ.

ತಮ್ಮಡೆ ಬಳಿತೋರಿದ ಮರುಗುತ ಕೂಳಾಳು,
ತೆಗೆಯನು ನಿಮ್ಮಯ ಮಾತನು ಮಸಣವ ಕಾವಾಳು
ದಿಕ್ಕಿಲ್ಲದ ಕಡುಬಡವೆ
ಸುತನಿಗೆ ಸದ್ಗತಿ ಎರೆವೆ.
ಎನಗಾದವನೆಲ್ಲಾದನೊ—ಹಾ—ಮಸಣದಿ ನೆನೆವೆ !

**ಉಪಾಸಿಪ್ರಧಾನ**

ಮಗಳೇ, ಮಸಣದ ರುದ್ರೋಪಾಸಕ ಮುನಿಗಳ
ಹೃದಯವೆ ಝಲ್ಲೆನಲು
ಈ ವೇಳೆಯೊಳೀ ತಾಣದೊಳೀ ತೆರ ವ್ಯಸನದೊಳೂ
ನೆರವಿಲ್ಲದೊಲು
ಶವ ಸಂಸ್ಕಾರದ ವಿಧಿಗಾಶಿಸಿ ಬಹ ಕುಲವಂತೆಯೆ
ಆರೌ ನೀನು ?
ಹೊಸಬಳೆ ಹೊಳಲಿಗೆ, ಪತಿ ಬಳಿಗಿಲ್ಲವೆ, ಮಂಗಳೆ,
ನಿನ್ನೀ ಪರಿ ಏನು ?

ಚಂದ್ರಮತಿ

ನಾನಾರೆಂಥವಳೆನ್ನಿರವಿನ ತೆರವೇನು
ನಾನೇ ಅರಿಯೆನು ಹಿರಿಯರೆ, ಅದನೊರೆದೇನು ?
ನನ್ನಿಂದಿನ ದುರ್ಗತಿ ಸಾಲದೆ ತಂದೆಗಳೇ
ನನ್ನಿತಿವೃತ್ತಾಂತವನರಿಯದೆ ಮರುಕಗೊಳೆ ?

ಉಪಾಸಿಪ್ರಧಾನ

ಮನ್ನಿಸು, ಮಾನಿನಿ, ದುಃಖಾಹತರನು ಪ್ರಶ್ನಿಪ ದುರ್ನಯವ
ಸೌಭಾಗ್ಯವ ಕಂಡವಳಂತಿಹೆ ಅದರಿಂ ತಳೆದೆ ಕುತೂಹಲವ.

ಚಂದ್ರಮತಿ

ಸಂದಾ ಸೌಭಾಗ್ಯದ ನೆನವಿಂದೆನಗೇಕೆ ?
ಆ ನೆನವೆನ್ನಂ ನಗುತಿಹ ನಿಯತಿಯ ಕೇಕೆ !
ಬಿರುಗಾಳಿಗೆ ತರಗೆಲೆಯಂತಾದೆವು ವಿಧಿಗೆ
ತೀರದ ಗಿಡ ನೆರೆಗಾದವೊಲಾದೆವು ವಿಧಿಗೆ
ನಾವಿಚ್ಛಿಸಿ ಪಡೆದೀ ಗತಿಗದ ದೂರುವುದೇ ?
ಪಡೆದುದ ಪಟ್ಟಲ್ಲದೆ ಕರ್ಮವು ತೀರುವುದೇ ?
ಅರಿಯದರಾರೈ ನಮ್ಮೀ ಕರುಣದ ಕತೆಯ
ಪತಿ ಸಿರಿನೀಗಿದ ಸುತನಂ ಮಾರಿದ ಸತಿಯ,
ಹುಲುಹೊತ್ತಲೆದನು ದೊರೆ ತನ್ನನೆ ಮಾರಿಕೊಳೆ
ಇಂತಾಯ್ತೆಮ್ಮೀ ಬಾಳೊಳು ವಿಧಿ ಬೆಳೆದ ಬೆಳೆ
ಅರಸಿತಿ ನಾ ತೊತ್ತಾಗಿಹೆನೀ ಹೊಳಲೊಳಗೆ.

ಉಪಾಸಿಪ್ರಧಾನ

ಮಗಳೇ, ನೀನಾ ರವಿಕುಲದರಸನ ಸತಿಯೋ ?
ಸತ್ಯದ ಭ್ರಮೆಯಿಂ ತೊಳಲುವ ರಾಜ್ಯಭ್ರಷ್ಟನ ಸಹಚರಿಯೋ ?
ತನ್ನಭಿಮಾನಕೆ ಸತಿಸುತರನು ಭೋಗೈಶ್ವರ್ಯದ ಗತಿಯಿಂ ವಂಚಿಸುತ
ಈ ತೆರದಾಪತ್ತೊಳು ಕೆಡಹಿದ ಶಠನೆಂಥ ದೊರೆ, ಎಂಥ ಪತಿ, ಎಂಥ ಪಿತ?

ಚಂದ್ರಮತಿ

ತಪಸಿವರ,

ಪತಿಯನು ಕುರಿತೀ ಕೆಡುನುಡಿಯಾಡದಿರಿ
ನನ್ನೊಪ್ಪಿಗೆಯಿಂದಾತನು ಧರ್ಮವ ನಂಬಿದನಿಂಥ ಪರಿ
ಮುನಿ ಬೇಡಲು ದೊರೆ ಹಿಂಜರಿಯದೆ ಕೊಡೆ ನಾನೇ ನೀರೆರೆದೆನು
ದಕ್ಷಿಣೆಗೆ,
ಮಮತೆಯನೆಲ್ಲವನೀ ಪರಿಯೊಳು ತೆತ್ತೆವು ಆ ವಚನದ ರಕ್ಷಣೆಗೆ.

ಇಂದೆನ್ನಾ ದೊರೆ ಎಲ್ಲಿ ತಿರಿವನೋ
ತನ್ನ ಮಾರಿಕೊಂಡೆಲ್ಲಿ ದುಡಿವನೋ
ತನುಜನಳಿವ ತಿಳಿದೇನಗೈವನೋ
ಈ ವಂಶಕ್ಷಯವೆಂತು ತಾಳ್ವನೋ ?

ಉಪಾಸಿಪ್ರಧಾನ

ಓ ಕುಲದವಳೇ, ಮಗಳೇ, ವಿಧಿವಿಲಸಿತವೇವೇಳ್ವೆ
ಮುಂದಿನ ದುಃಖವ ನೀನೇಪರಿ ತಾಳ್ವೆ ?

ಚಂದ್ರಮತಿ

ಹಿರಿಯರೆ, ಮಗನಳಿದೀ ಸಂಕಟಕೂ ಮಿಗಿಲಾವುದಿದೆ ?
ಪತಿ ಹದುಳದೊಳಿಹನೇ ?

(ತೆರೆಯಲ್ಲಿ ಹರಿಶ್ಚಂದ್ರ)

'ಮಸಣಿಗಾ, ಮಸಣಿಗಾ,
ಈ ಚಿತೆಗೈದವರಾರು
ಈ ಹೆಣದವರೆಲ್ಲಿ ?'

ಚಂದ್ರಮತಿ (ಗಾಬರಿಗೊಂಡು)

ಹಿರಿಯರೇ, ಯಾರೀತ ?

ಉಪಾಸಿಪ್ರಧಾನ

ಈ ಮಸಣದ ಕಾವಾಳಿವ
ನನ್ನಿಕಾರ ನಿಷ್ಕರುಣಿ !

(ತೆರೆಯಲ್ಲಿ ಹರಿಶ್ಚಂದ್ರ)

'ಎಲ್ಲದಗಿಹರವರು ಸುಡಿಗೊಡರೇಕೆ
ಸುಡುಹಾಗವ ಕೊಡದಿರೆ ಕೆಡಿಸುವೆ ಚಿತೆಯು
ಬಿಡು ಬಿಡು ಮಸಣಿಗ . . .'

(ಮಸಣಿಗ)

'ತಡೆ ತಡೆ ಕೈ ತೆಗೆ
ಹೆಣವೇನಪ್ಪ ಮಾಡಿತು ನಿನಗೆ'

ಚಂದ್ರಮತಿ (ಕಾತರಳಾಗಿ)

ಇವ ಮಸಣಿಗ—ಮತ್ತದು ಇನಿಯನ ದನಿಯಂತಿದೆ !

ಉಪಾಸಿಪ್ರಧಾನ

(ಕೂಗುತ್ತಾ)

ಹರಿಶ್ಚಂದ್ರ ಹರಿಶ್ಚಂದ್ರ, ಇತ್ತ ಬಾ ಇತ್ತ ಬಾರೈ
ಆ ಚಿತೆಯ ಸಂಗತಿಯನರಿವೆ ಬಾ, ಇತ್ತಬಾರೈ !

ಚಂದ್ರಮತಿ

(ನಿಜವರಿತು 'ಹಾ' ಎಂದು ಮುಖಕ್ಕೆ ಸೆರಗೆಳೆದು ರೋದಿಸುತ್ತಾ)

ಮಸಣದಾಳಾದನೇ ನನ್ನೆರೆಯು ನನ್ನ ಪತಿ
 ಇನಕುಲದ ನನ್ನಿಗಗೆ ಇಂಥ ಗತಿಯೆ !
ಅರಿಯದೇಗೆಯ್ವನೋ ಹಸುಳೆಗೇಗೆಯ್ವನೋ—

ಉಪಾಸಿಪ್ರಧಾನ

ಸೈರಿಸೌ ಸೈರಿಸೌ
ಶಿವನ ನೆನೆ (ಎಂದು ಒಂದು ಕಡೆ ನಿಲ್ಲಿಸುವನು)

ಹರಿಶ್ಚಂದ್ರ (ಪ್ರವೇಶಿಸಿ)

ಕಂಡಿರ ತಪಸಿಗಳೇ ಮಸಣದೊಳೂ
 ಬಿಟ್ಟಿಯ ಗಿಟ್ಟಿಸಲೆಳಸುವ ಭಂಡರನು ?
ಕಟ್ಟಿಗೆಯೇರಿಸಿ ಶವವನು ದಿಟ್ಟಿಗೆ ಬೀಳದೆ
 ಹುದುಗಿದ ಪುಂಡರನು ?

ಮಸಣದ ಬಾಡಿಗೆಗೂ ಗತಿಯಿಲ್ಲದ
ಕೃಪಣರಿಗೇತಕೆ ಸುಡಬಯಕೆ ?
ಸರ್ವಂವಹೆ ಭಾಗೀರಥಿಯಿಲ್ಲವೆ ಅಂತಹ ಹೆಣಕೆ ?

**ಉಪಾಸಿಪ್ರಧಾನ**

ಅರಸೇ, ಏನನು ಕಂಡೆ, ಏಕೀ ಮುಳಿಸು ?

**ಹರಿಶ್ಚಂದ್ರ**

ಕಾವಲು ಬರುತಿರೆ ಕಂಡೆನು ಹೊಸಚಿತೆಯ
ಅದರೊಳಗಾರೂ ದಿಕ್ಕಿಲ್ಲದ ಎಳೆಯ
ಇದಗೈದವರಾರೆನ್ನೊಪ್ಪಿಗೆಯಿರದೆ
ಸುಡುಗಾಡಿಗೆ ಸಲ್ಲುವ ಸುಂಕವ ತೆರದೆ
ಎಂದಚ್ಚರಿಯೊಳೆ ನಿಂತೆನು, ಆರೆಗಳಿಗೆ
ಈ ತೆರ ಮೋಸಕೆ ಮಸಣಿಗ ಕೊಟ್ಟನೆ ಸಲಿಗೆ ?
ತಾನೆಯೆ ಕಾವಲೊಳಿದ್ದನು ಆ ಹೊಲ್ಲ.
ಆರೀ ಶವಕೆಂದೆ—ಮರುನುಡಿಯಿಲ್ಲ.
ದಣಿಗೀತೆರವಂಚನೆ ಖತಿಗೊಳಿಸಿತು ನನ್ನ
ಈ ಪರಿ ಧಾರ್ಷ್ಟ್ಯವ ಕಾಣೆನು ನಾನೀ ಮುನ್ನ
ಮರಳಿಯು ಶವಕಾರೆನೆ ಉತ್ತರ ಬರದೆ
ಚಿತೆಯಿಂದಾ ಬಾಲಕನನು ಧರೆಗೆಳೆದೆ.

**ಚಂದ್ರಮತಿ** (ಥಟ್ಟನೆ ಮುಂದೆ ಬಂದು)

ಹಾ ಹಾ, ಏಗೆಯ್ದಿಯೋ ತಂದೆ ಏನ ಗೆಯ್ದಿ
ನೊಂದನಲಾ ಸುಕುಮಾರಂ ನೊಂದನಲಾ
ಹೆತ್ತವರಿಂದೀ ತೆರ ಭಂಗವೆ ಸತ್ತವಗೆ ?
ಮಗನೆಂದರಿಯದೆ ಹೋದೆಯ ಮಗನ ?

**ಹರಿಶ್ಚಂದ್ರ** (ದಿಗ್ಭ್ರಾಂತನಾಗಿ)

ಆರೀಕೆ ? ಆರೀಕೆ !
ರೋಹಿತಾಶ್ವನ ಮಾತೆ ಚಂದ್ರಮತಿಯೆ !

ಆತನೆನ್ನಣುಗನೇ ತಂದೆ ನಾನೇ
ಪಾಪಿ ನಾ ಪಾಪಿ ನಾ . . . !

(ಶವವಿರುವ ಕಡೆಗೆ ಧಾವಿಸುವನು)

**ಚಂದ್ರಮತಿ** (ಅಳುತ್ತ)

ಎಂಥಗತಿಯೊದಗಿತ್ತೈ ನನ್ನ ದೊರೆ ನನ್ನ ಪತಿಗೆ
ಸೈರಿಸುವನೆಂತಹಾ ವರಜಾತ ಪುತ್ರನಳಿವ
ಲಾಲಿಸಿದ ಕೈಯೊಳೇ ಹಾಳಿಗೆಳೆದುದ ಹಲುಬಿ
ಏಗೆಯ್ವನೋ ಕಾಣೆ ಹೊಂಗರುಳ ತಂದೆ.

**ಉಪಾಸಿಪ್ರಧಾನ**

(ಅತ್ತೆಡೆ ಓಡಿ ಹೋಗುವವಳನ್ನು ತಡೆದು ನಿಲ್ಲಿಸಿ ಸಂತೈಸುತ್ತಾ)

ತಾಳು ಮಗಳೇ, ತಾಳು, ಅವನತ್ತು ಕರಗಿಸಲಿ ತನ್ನಳಲ ಭಾರ
ಇಂದುವರೆಗೆಂತಂತೆ ಈ ಕೇಡಿಗೂ ಕುಸಿಯನೀ ನನ್ನಿಕಾರ

(ಉಪಾಸಿಯೊಬ್ಬನಿಗೆ)

ಪೋ ಗೆಳೆಯ ಪೋಗು ನೀ ಅರಸನನು ಕರೆದು ತಾ
ಹೆಣದತ್ತಣಿಂದಿತ್ತ ನೇಹಿಗರ ಕಡೆಗೆ.
ಎಷ್ಟು ಹಲುಬಿದೊಡೇನು, ಬರಿಮಣ್ಣು ಕಟ್ಟಗೆ
ಹಿಡಿಬೂದಿ ಇನ್ನದೀ ಸುಡುಗಾಡಿಗೆ.

(ಉಪಾಸಿ ಹೊರಡುತ್ತಾನೆ)

**ಉಪಾಸಿಗಳು**

೧

ಹೋದ ದೊರೆ, ಹೋಗಿ ಕೆಡೆದಾಡುವನು ಸುತನ ಮೇಲೆ
ಮೃತನ ಮೈತೊಳೆವುದಾ ಕಂಬನಿಯ ಮಾಲೆಮಾಲೆ
ಮಸಣದೀ ನೈರ್ಘೃಣ್ಯವಳಿಸುತಿದೆ ಪಿತನ ಮಮತೆ
ಆತ್ಮೀಯ ಶೋಕದಿಂ ಸಂಭ್ರಮಿಸಿತವನ ಸಮತೆ !

೨

ಈಗಳವನಾ ಕಳೇಬರವ ಕೈಗೆತ್ತಿಕೊಳ್ಳುತಿಹನು
ಎತ್ತಿಕೊಂಡಾಬಳಿಕ ಮೈಯನೆದೆಗೊತ್ತಿಕೊಳ್ಳುತಿಹನು
ಎತ್ತಿಕೊಳ್ಳುತ ಬಹನು ಕುಟಿಯುತ್ತ ದುಃಖತಪ್ತನಾಗಿ
ಮಾನುಷ್ಯವನು ಮೆರೆದು ಈ ಸತ್ಯ ನಿಷ್ಠುರ ಮಹಾತ್ಯಾಗಿ.

೧

ಒಂದುಗಳಿಗೆಯೊಳನ್ಯ ಮತ್ತೊಂದು ಗಳಿಗೆಯೊಳು
ತನ್ನಣುಗ, ತನ್ನವನು ಚೆನ್ನಮುದ್ದ !
ಮಮತೆ ಕರುಳಿರಿವುದು ಇರವನೇ ಬೇಯಿಪುದು
ಹದುಳಗಾಣನು ಭವದಿ ಪ್ರೇಮಬದ್ಧ

೨

ಕಳೆ ಅರಸೆ ದುಃಖವನು, ಕಳೆಗೊಂಡು ಬಲುಮುದ್ದು.
ಗರೆದ ಆ ಚೆನ್ನನನು ನೆನೆನೆನೆದು ಹಲುಬಿ
ಬಳಿಕ ಈ ನಿಶ್ಚೇಷ್ಟ ಶವವ ಕಾಣುತ ಹೇಸಿ
ಅಳಲಲಳಿಯಿರೈ ನೆನಹ ಮಠಹತ್ತ ತರುಬಿ.

(ಹರಿಶ್ಚಂದ್ರ, ಮಸಣಿಗ, ಉಪಾಸಿ ಶವದೊಡನೆ ಬರುವರು ; ಚಂದ್ರಮತಿ ಅವರತ್ತ ಸರಿಯುವಳು.)

**ಉಪಾಸಿಪ್ರಧಾನ**

(ಹೆಣವನ್ನು ನಿರುಕಿಸಿ, ಉಪಾಸಿಗೆ)

ಕೊಂಡೊಳಗೆಯಿರಿಸು ಪೋ—ಇತ್ತ ಬಾರೈ ಅರಸೆ
ಧೃತಿಯು ತಳೆ, ಮುಂದಿನೊಪ್ಪದ ಹವಣಕಾಣು.

(ಉಪಾಸಿಯೂ ಮಸಣಿಗನೂ ಶವವನ್ನು ಹಟ್ಟಿಯೊಳಕ್ಕೆ ತೆಗೆದುಕೊಂಡುಹೋಗುವರು)

**ಹರಿಶ್ಚಂದ್ರ**

ಮುಂದುಗಾಣೆನು, ಪೂಜ್ಯ. ಕಂಗೆಟ್ಟೆ ಜಾಣ್ಗೆಟ್ಟೆನು.
ಸುತನ ಕೆಡಹುತ ಮಸಣ ಹೊಕ್ಕಿತೆನ್ನೆದೆಯ !
ಆಲಿಕಲ್ ಕೈಯನೆದೆಗಿಕ್ಕಿತಯ್ಯ,
ತೀರಿಹೋದೆನು ನಾನು, ನನ್ನಪ್ಪ, ನನ್ನಜ್ಜ
ತೀರಿಹೋದರು ಎಲ್ಲ, ಇನ್ನಿಲ್ಲ ಕಜ್ಜ. (ಕುಸಿಯುವನು)

**ಉಪಾಸಿಪ್ರಧಾನ**

ಕುಸಿದನೇ ಎದೆಗಾರ ಕಟ್ಟಳಲಿನಿಂದ
ತಟ್ಟತಳಕುರುಳಿದನೆ ವಿಕಳನಪ್ಪಂದ.

ತಾಳಿಕೋ ತಾಳತಸೆ ಹೊಸದಲ್ಲವೈ ನಿನಗೆ
ಈ ನಿತ್ಯಯೋಗ !
ಹೀರಿ ಹೀದೆಯನಿಂತು ಬಿಸುಡುವ ಮೃತ್ಯುಭೋಗ !

**ಹರಿಶ್ಚಂದ್ರ**
(ಚೇತರಿಸಿಕೊಂಡು ಮೇಲಕ್ಕೆದ್ದು)

ಅಹುದಹುದು ರಸಹೀರಿ ಮೃತ್ಯುವಗಿದುಗಿದಿರುವ
ಬರಿ ಹೀದೆ, ಕಸ, ಸಿಪ್ಪೆ ಇಂದೆನ್ನ ಮಗ ರೋಹಿತಾಶ್ವ !
ನನ್ನ ಸುಕೃತಗಳೆಲ್ಲ ವಿಕೃತವಾದಂತೆಯೇ ಪಟ್ಟಿರುವನಲ್ಲಿ
ನೋಡೆ ಕಂದೆಗೆವಂತೆ ಕಳೆಗೆಟ್ಟು ಘೋರನಾಗಿ
ಎಲ್ಲಕೂ ಕಣ್ಮುಗಿದು ಮಲಗಿರುವನಾ ಮಣ್ಣ ಮೇಲೆ
ತಂದೆ ಈ ವರಲಬ್ಧನಿಗೆ ಹೇಸುವೋಲೆ
ತಾಯೆ ಆ ಮೈ ದಹಿಸಲಾತುರಿಸುವೋಲೆ !
ಹಿರಿಯರೇ ತಾವು ಶಂಕಿಸುತಿದ್ದ ಭವಿತವ್ಯ ಫಲಿಸಿತು
ನನ್ನೊಡನೆ ಛಲಿಸುವೀ ವಿಧಿಯ ಛಲ ಹುಲುಸಿತು
ಕೆಟ್ಟೆನಾ ಕೆಟ್ಟೆನಾ ಏಗೆಯ್ವೆನೀಗ ?
ತೆರವ ತೆರದಿರಲಿಲ್ಲ ಮಸಣದೊಳು ಸುಡಲು ಜಾಗ !

**ಚಂದ್ರಮತಿ**

ಎನ್ನರಸ,ಎನ್ನಿನಿಯ, ಎನ್ನ ಸರ್ವಸ್ವವೇ
ನಿನಗೆ ನಾನೆಂಥಳಲ ತಂದೆ,
ಇಂಥ ಸುಡುಗಾಡೊಳೂ ನಿನ್ನನೆ ಕಾಡ ಬಂದೆ.

**ಹರಿಶ್ಚಂದ್ರ**

ಕಾಡುವಳು ನೀನಲ್ಲ, ಕಾಡುವವ ದೈವ
ನೀಡಬಲ್ಲುದನೆಲ್ಲ ಕೊಡಲೆನ್ನ ಜೀವ
ನಿನಗು ನಾನೊದಗಂತಾಯಿತೆನ್ನ ಗತಿ—
ಕಂದನೆಂತಳಿದನೌ ಹೇಳು, ಚಂದ್ರಮತಿ.

**ಚಂದ್ರಮತಿ**

ಹಳುವಿನೊಳು ಹಲುಹುಳ್ಳಿಗಳನರಸಿ ನಡೆದ
ಹೊದರಿನೊಳು ಹಾವಗಿಯಲಲ್ಲಿಯೇ ಮಡಿದ

ದಣಿಯನೆರೆದೆನು ಸುತನ ಸದ್ಗತಿಯ ಕ್ರಿಯೆಗೆ
ಕರಗಲಿಲ್ಲಾ ಹೃದಯ ತಾಯ ಗೋಳ್ಕರೆಗೆ.
ಪರದೇಶಿಯೆಂದು ಜನ ನೆರವಾಗಲಿಲ್ಲ
ಬರಿಗೈಯ ಬಡವೆ ನಾ ತಾಳಿ ಹೊರತಿಲ್ಲ
ಈ ಕರುಣಿಕತ್ತಲೆಯ ಕಣ್ಮರೆಗೆ ಕಾದೆ
ಹೆಣಹೊತ್ತು ಹೆಬ್ಬಳಿಯ ತೊರೆದಿಲ್ಲಿಗಾದೆ.

**ಹರಿಶ್ಚಂದ್ರ**

ಕೇಳಲಾರೆನು ಮಡದಿ ಅರಸುಮುತ್ತೈದೆ
ಎಂಥ ಬದುಕನು ಬಾಳಿ ಎಂಥ ಗತಿಗಾದೆ
ಹೆರವರಲ್ಲಿಗೆ ಲೋಕವೆನಿತು ನಿಷ್ಕರುಣಿ!

**ಚಂದ್ರಮತಿ**

ತಮ್ಮ ಹೊರೆ ತಮಗಿರಲು ಆರಿಗಾರು ಋಣಿ?

**ಹರಿಶ್ಚಂದ್ರ**

ದಿಟ, ಪರನೆಂಬ ಭಾವ ಬರೆ ಜನವಹುದು ನಿರ್ಘೃಣ
ಪರನೆಂದೆ ಧರೆಗೊಗೆದೆ ನಾನೆನ್ನ ಸುತನ.
ನಿಷ್ಠೆಯಿಂ ಶುಷ್ಕ ನಾ, ಎಲ್ಲವಾಯ್ತನ್ಯ
ಸುಡುಗಾಡ ಬಳಕೆಯೊಳು ವೇದನಾಶೂನ್ಯ!

**ಚಂದ್ರಮತಿ**

ಕಳವಳಿಸದಿರು ಕಾಂತ, ಈ ಇರುಳೊಳೆಂತರಿವೆ ಮಗನ
ಎಂತರಿವೆ ಗರವೇರಿ ಕಳೆಗೆಟ್ಟ ನಿಡುನಿದ್ದೆಯವನ?

**ಹರಿಶ್ಚಂದ್ರ**

ದಿಟ ದಿಟ, ಎಂತರಿವೆನಾ ವಿಷವಿಕೃತ ಸುತನ ತನುವ
ಕಳೆಯುಗುವ ನಗುಮೊಗದ ತೇಜಸ್ವಿ ನೆನವೊಳಿರಲು?
ಎಂತರಿವೆ ಕಟ್ಟಿಗೆಯ ಜತೆಗೆ ನಿಶ್ಚೇಷ್ಟವಾಗಿ
ಇಚ್ಛೆಗೆಟ್ಟೊರಗಿದಪನೆನ್ನ ಪಟುಬಾಲನೆಂದು?

ನಿಂತೆ ನಾ ನಿರ್ಮಮತೆಯೊಳು ಮೂಕವೇದನೆಯನಾಂತು
ಎದೆಗೊತ್ತಿ ಶಿರವನಾಘ್ರಾಣಿಸುವ ಬಯಕೆಗೊಳದೆ.
ಕರ್ತವ್ಯ ಕಾಠಿಣ್ಯದಿಂದೆಳೆದೆ ನಾ ನೆಲಕೊಗೆದು ಬಿಸುಟೆ ;
ಅರಿತ ಮೇಲೆರೆದೆ ಮನ್ನಿಸೆಂದಾ ಮಾನಿ ಮೌನಿ
ಇಂದವನನೆಚ್ಚರಕೆ ತರದೆನ್ನ ದೀನವಾಣಿ
ಕಂದೆರೆಯೆ ಸಾಕೆನ್ನ ದುಃಖ ಹಿಂಗುವುದೆಂಬೆ
ತೆರೆದೆನ್ನ ನೋಡನೀ ಅಪಮೃತ್ಯುಯೋಗಿಭೋಗಿ.
ಇನ್ನಿಲ್ಲವೆಮಗಿವನು—ಇವನ ನೆನವೊಂದೆ ನಮಗೆ
ಮೆಲ್ನಗೆಯ ಬೆಳಕಿಲ್ಲ ಚೆಂಬಾಯ ಚೆನ್ನುಡಿಗಳಿಲ್ಲ
ಅಂಗಾಂಗದೊಳು ಚಲಿಸಿ ಚೆಲುವ ಕೊನರಿಸುತಿದ್ದ ತೇಜ
ಇನ್ನಿಲ್ಲ ದಣಿವೆಲ್ಲವಾರಿಸುತಲಿದ್ದ ಮೈಯ ತಂಪು
ಸಾವನೇ ಗೆದ್ದೆನೆಂಬುಲ್ಲಸವನೆನಗಿತ್ತ ಅಪ್ಪುಗೆಯ ನಲಿವು.
ಕಟ್ಟಿಗೆಯೊಲೊರಗಿರುವನೀ ಹಟ್ಟಿಯೊಳಗೆ
ಹೆತ್ತವರೆ ಮೈಯ ಸುಡೆ ತವಕಗೊಳುವೋಲೆ.

(ಸ್ವಲ್ಪ ಹೊತ್ತು ಮೌನದಿಂದಿದ್ದು)

ಕಡೆಗು ಈ ಕೊನೆ ಋಣವ ಸಲಿಸಲಾಗದ ಕಾರ್ಪಣ್ಯವೆಮಗೆ
ನಾವೆದುರು ಬೀಳ್ವಂತೆ ನಮ್ಮನಟ್ಟಿತು ನನ್ನಿ ಸಂಕಟದ ಕೊನೆಗೆ.

**ಉಪಾಸಿಪ್ರಧಾನ**

ಬರಿದೆ ಗೋಳಿಡುತಿಹೆ, ನಿನ್ನ ಕೈಯೊಳೆಯಿಹುದು ಇದಕೆ ಪರಿಹಾರ !
ಏಕೀ ನಿರಾಸೆ ದೊರೆ, ಗರವಿಳಿದು ಗಳಿಗೆಯೊಳೆ ಬಹನೀ ಕುಮಾರ,
ಕಾಲ ಮುಂಚಿಲ್ಲವೈ ಅಪಮೃತ್ಯುಶಮನಕೀ ಕಲ್ಪವನು ರಚಿಸೆ
ನಿನ್ನ ಕಾಡುತಲೆಮ್ಮನೂ ನಗುತಿರುವ ದುಷ್ಟಸತ್ತ್ವಗಳ ದಮಿಸೆ.

**ಹರಿಶ್ಚಂದ್ರ**

ಬದುಕುವನೆ ಬದುಕಬಲ್ಲನೆ ನನ್ನ ಚಿಕ್ಕ ?

**ಉಪಾಸಿಪ್ರಧಾನ**

ಬದುಕುವನು ತುಸ ಉಳಿವೆಯಾದೊಡೆ ನನ್ನಿ ಸೊಕ್ಕ!

ಹರಿಶ್ಚಂದ್ರ

ಇಂತು ನಿಡುನಿದ್ದೆಯವನೆಚ್ಚರಕೆ ಬಹನೇ?

ಉಪಾಸಿಪ್ರಧಾನ

ವಿಧಿಯು ಬಲ್ಲೆವು ತೀರಲೀ ಗರದ ಬವಣೆ

ಹರಿಶ್ಚಂದ್ರ

ಜೀವಿಸನೆ ನಾನಿವ ಕೊಟ್ಟು ನಿಷ್ಠೆಗೆಡೆದೆ?

ಉಪಾಸಿಪ್ರಧಾನ

ಆ ಗರವ ನೀಗ ನೀನೀ ಗರವ ಕೊಳದೆ

ಹರಿಶ್ಚಂದ್ರ

ನಾ ನನ್ನಿಗೆಡದಿರಲು ಸುತಗೆ ಬದುಕಿಲ್ಲ
ಈ ಹೊಲೆಯೊಳಡಗಿತೇ ನಮ್ಮ ಲೇಸೆಲ್ಲ!

ಉಪಾಸಿಪ್ರಧಾನ

ಋಷಿಗೆ ಮಾತಿತ್ತುದೂ ಚಂಡಾಳಗಿತ್ತುದೂ
ಒಂದೆ ಎಂದೆಣಿಸುವೆಯ ಅರಸೆ?
ಆತಗಿತ್ತಿತ್ತುದನು ನಮಗೀಸನೀವುದನು
ಉಚಿತವೇ ಸಮತೂಗಬಯಸೆ?

ಹರಿಶ್ಚಂದ್ರ

ಹಿರಿಯ, ಪೂಜ್ಯ, ಆರ್ಯ—
ಅರಿಯೆನ್ನೆ—ನೆನಪಿಲ್ಲ—ಎಂದಾರಿಗೇಕೆಷ್ಟ
—ಮಿತ್ರನೆಂಬುದನು;
ಮಾತನಿತ್ತವ ನಾನು ಎಂಬೊಂದೆ ಅರಿವೆನಗೆ!
ನನ್ನುರವು ನನ್ನೊಜ್ಜೆ ನನ್ನ ಬೆಲೆಯದಕೆ
ಅದೆ ತುಂಬಿ ತುಡುಕಿಹುದು ನನ್ನೊಳಗನು
'ಬಿಡೆ ಬಿಡುಳೆ' ಎನ್ನುತಿದೆ ನಾ ಕೊಟ್ಟ ನುಡಿಯೆನಗೆ,
ನನ್ನವಿವನೆಲ್ಲವನು ತನ್ನದೆನ್ನುತಿದೆ

ಹಲ್ಲೂರಿ ಹಿಡಿದಿದೆ ನಾ ಜಗುಳದಂತೆ
ನೆಲಬಿಟ್ಟು ನೇಲುತಿಹೆನಂತರದೊಳೆ
ನಾನದರ ಪೋತವೋ ಬೇಟೆಯೋ ಕಾಣೆನ್ನೆ
ವಿಲಿವಿಲಿಸುತಿಹೆನಾರ್ಯ ಮುಂದುಗಾಣದೆಯೆ
ಏಗೆಯ್ವುದೋ ಕಾಣೆ; ಎಸಕವರಿಯೆ.

(ಚಿಂತಾಕುಲನಾಗಿ ಸ್ತಬ್ಧನಾಗುವನು)

### ಚಂದ್ರಮತಿ

ಏತಕೀ ದುಗುಡ ನಿನಗೆಲೆ ನನ್ನಿಯರಸೇ
ನೀ ಮಾತುಗೆಡಲೇಕೆ ಇವರು ಪತಿಕರಿಸೆ ?
ಉಳಿವನೇ, ಉಳಿಸಬಲ್ಲಿರ ಹಿರಿಯರೇ ನಮ್ಮಿಳಿಯನ ?
ಮಗ ಬದುಕೆ ನೋಂಪಿಗೇತಕೆ ಭಂಗಬಹುದೆನ್ನಿನಿಯನ ?

### ಉಪಾಸಿಪ್ರಧಾನ

ಬದುಕಬಹುದಾ ಭೂತನಾಥನೆಮ್ಮೀ ಹವನಕಾಗೆ ಸುಪ್ರೀತ,
ಮಸಣದಾದಾಯದೀ ಧಾನ್ಯವಸ್ತ್ರಾದಿಗಳನೀಯೆ ಭೂನಾಥ.
ರಾಜಸೂಯವ ಗೈದು ಇಹಪರದ ಬಾಗಿಲೊಳಿೞ ಎನೆ ಮಸಣದೊಳಗೆ
ನಿಂತರಸು ತನ್ನ ವಶದೊಳಗಿನೀ ದ್ರವ್ಯಗಳನೀಯಲೆಮಗೆ
ಕಲ್ಪಗಳ ರಚಿಸುವೆವು ಗರವುಳಿದು ತನುಜಾತನೆಚ್ಚರಲು ಭವಕೆ.
ಈ ಮೊದಲೆ ಇದನರಿತು ಪರಿಹಾರವೆಸಗಲೀತನನೆರೆದೆವಿವಕೆ
ಹಿಂಜರಿದನೀ ದಾನ ದಣಿಗೆ ವಂಚನೆಯೆನುತ ಈ ಅರಸು ಮೊದಲು.
ಎಡೆಯಿಲ್ಲವೆಂದರಿಯ ನಿಷ್ಠೆ ಮಮತೆಗಳೆರವೊಳೊಂದೆ ಕಡೆ ನಿಲಲು !

### ಹರಿಶ್ಚಂದ್ರ

ದಿಟ ದಿಟ, ಬದುಕಿನೊಳು
ನಿಷ್ಠೆ ಮಮತೆಗಳೊಂದೆಕಡೆ ನೆಲಸಲಿಲ್ಲ ಜಾಗ
ಏಗೆಯ್ವೆನೇಗೆಯ್ವೆನೇಗೆಯ್ವೆನೀಗ ?

### ಉಪಾಸಿಪ್ರಧಾನ

ಬರಿಬರಿದೆ ಅಳಲುವೆ ಬರಿಬರಿದೆ ತೊಳಲುವೆ,
ತುಸವ ಅಷ್ಟನು ಗೈವೆ; ಏತರಿಂ ಮಗನುಳಿದ ಅದನೆ ಮರೆವೆ !

### ಹರಿಶ್ಚಂದ್ರ

ಅಹುದಹುದು ಪೂಜ್ಯನೇ,
ಹುಸಿಯೆ ಕೆಳೆ ನನಗೆಂಬೆ, ವಿರಸವಾಯಿತು ನಿಷ್ಠೆ
ಇಂದುವರೆಗದ ನೆಮ್ಮಿ ನಾನಾವುದನು ಪಟ್ಟೆ ?
ಬರಿ ಹಮ್ಮಿಗೆನ್ನಣುಗನಿವನ ಬಲಿಗೊಡಲೆ ?
ಈ ಛಲವ ಹಿಡಿದೆಮ್ಮ ಕುಲ ಕಮರಬಿಡಲೆ ?
ಬಾಳಿನೀ ಉಸುಬಿನೊಳು ಕೊನೆಗೊಂದು ಗಟ್ಟನೆಲ
ಸಿಕ್ಕಿತೆಂದಿದ್ದೆನಲ ನೋಂಪಿಯೊಳು ನಿಂತು !

### ಚಂದ್ರಮತಿ

ತಾಳು ತಾಳೆನ್ನರಸೆ, ದುಡುಕದಿರು ಮನೆಯ ತಂದೆ
ಕುಲಜ, ನೀ ಧರ್ಮಮತಿ, ಶಂಕೆಗಿದಕೇಕೆ ಸಂದೆ ?
ಮುನಿಜನಕೆ ಸಹಜವೈ ಸರಸವಾಡುವುದು ಕೇಡುಗಳ ಜತೆಗೆ,
ವಿಧಿಯನೆದುರಿಸಿ ಬರಿದೆಯೀಡಪ್ಪೆವೋ ಕಾಣೆ ವ್ಯಥೆಗೆ
ಗಾಳಿಗಳು ಕೊಡುವಸುವನಾಂತವನು ಮುನ್ನೊಲಹನೇ ?
ಮಾತುಗೆಟ್ಟುದ ನೆನಸುವೀ ಜಾತನಿಷ್ಟನಹನೆ ?
ಜೀವಗೊಂಡೆದ್ದರೇನೀತ ಮುನ್ನಿನೊಲೆ ತೊತ್ತು
ಸೊಗವಾಂತನಿವನಿಂದು ವಿಧಿಗೆ ತನ್ನಸುವ ತೆತ್ತು
ನನ್ನಿ ನಿಲೆ ಪಟ್ಟಪಾಡಿನಿದೈಯ ಸತ್ಯಮತಿಗೆ
ನಿಷ್ಠೆಯೊಳೆ ನಿಲು ತಂದೆ, ಮನಮಾಡು ಸುತನ ಗತಿಗೆ.
ಮರಳಿ ತಾಳ್ಮೆ ಮನದಿ ರಾಜ್ಯವನು ಕೊಟ್ಟ ಮತಿಯ
ನಮ್ಮ ಮಾರುತ ನೀನೆ ಮಸಣದಾಳಾದ ಧೃತಿಯ !

### ಉಪಾಸಿಪ್ರಧಾನ

ಅಚ್ಚರಚ್ಚರಿಯಹಾ, ತಂದೆ ಮಗನುಳಿಸಲಿರೆ
ಬೇಡವೆಂದಡ್ಡ ಬಹಳಿವಳೆಂಥ ತಾಯಿ !

### ಚಂದ್ರಮತಿ

ನಮ್ಮದೆಲ್ಲವನಿತ್ತು ಕೊಂಡ ನನ್ನಿಯ ತೆತ್ತು
ಮಗನನುಳಿಸಿಕೊ ಎನೆ ಬಾರದಲ ಬಾಯಿ,

ಉಪಾಸಿಪ್ರಧಾನ

ಹುಸಿ—ನನ್ನಿ ಎರಡಕ್ಕು ಬಾಳೆ ತವರಾಗಿರಲು
ಆ ಬೆಲೆಯ ತವರುಳಿಸೆ ತುಸ ಹುಸಿದೊಡೇನು?

ಚಂದ್ರಮತಿ

ಹೆಜ್ಜೆ ಹೆಜ್ಜೆಗು ಬಾಳ ಬೆನ್ನಟ್ಟಿಬಹ ಸಾವ
ಹುಸಿಗೈವ ಹದವ ತಾವರಿತಿರುವಿರೇನು ?

ಉಪಾಸಿಪ್ರಧಾನ

ಇಂದಹುದು ನಮ್ಮಿಚ್ಛೆ—ಮುಂದೆ ಆ ಶಿವನಿಚ್ಛೆ
ಇಂದಿನೀ ಶುಭಕೆಳಸು—ನಾಳೆ ಮಾತೇಕೆ?

ಚಂದ್ರಮತಿ

ಈ ಗಳಿಗೆ ಶುಭಕಾಗಿ ಇರವಳಿವನಾಳುವಾ
ಶಿವನೆ ಕೈಬಿಡುವಂತೆ ನನ್ನಿಗೆಡಲೇಕೆ ?
ವರಲಬ್ಧನೆಮ್ಮಣುಗ ಇವ ಹುಸಿಯ ಮಗನಾಗಿ
ಲೋಕನಿಂದೆಗೆ ತಂದೆ ಸಲೆ ಬಾಳಬೇಕೆ ?
ಹಿರಿಯರೇ,
ಹುಟ್ಟಿದಂದಿದುವರೆಗಿವನ ಕ್ಷಣವೂ ಬಿಡದೆ
ಬೆನ್ನ ಹಿಡಿದಿತ್ತು ಸಾವು ;
ಇಂದಳಲ ಬೆಂಕಿಯಿಂದಿಂತು ಪರಿಕಿಸಲೆಮ್ಮ
ಬಂದಿತಾ ಹರನ ಹಾವು.
ನಿಮ್ಮ ಮಾತಿಗೆ ನಾನು ಮರುನುಡಿಯಲರಿಯೆ
ಬಟ್ಟೆದೋರಿರಿ ಸುತಗೆ ಸದ್ಗತಿಯು ದೊರೆಯೆ.

ಉಪಾಸಿಪ್ರಧಾನ

ತಾಯೆ, ಅಗ್ನಿಕ್ರಿಯೆಯ ನಡೆಯಗೊಡುವನೆ ಅರಸು
ಸುಡುಗಾಡ ಹಾಗವನು ನೀನು ತೆರದೆ ?
ಎಂತು ಚಿತೆಗಿಡುವೆ ಈ ನನ್ನಿಕಾರನು ನಿನ್ನ
ಬಟ್ಟೆಯೊಳು ಸುಡಗೊಟ್ಟು ನನ್ನಿ ಕೆಡದೆ ?

**ಹರಿಶ್ಚಂದ್ರ**

ನನ್ನಾತ್ಮವನು ನಾನು ವಂಚಿಸದೆ ಸುತನುಳಿಯು
ವಂಚಿಸದೆ ಸದ್ಗತಿಯ ಕಾಣಲಾರ !
ಇಲ್ಲಿ ಸಲದಲ್ಲಿ ಸಲದುಭಯವಂಚಿತನಾಗಿ
ಬೆಂತರನ ಗತಿಗಾದನೆನ್ನ ಸುಕುಮಾರ.
ನನ್ನಿಯೊಳು ನಿಂತು ನಾನೇನು ಸಾಧಿಸುತಿಹೆನು
ಆವ ಶಿವದೊಡನೆನ್ನ ಛಲ ಸೆಣಸುತಿಹುದು?
ಏನುಳಿದು ಏನಳಿಯೆ ಲೇಸೆನಲು ಕಾಣೆ ನಾ
ಜೀವ ಸಾವಿನ ತಳಕೆ ಕುಸಿಯುತಿಹುದು.

(ಸ್ವಲ್ಪಹೊತ್ತು ಚಿಂತೆಯೊಳಿದ್ದು ಚಂದ್ರಮತಿಗೆ)

ಎನ್ನ ಸತಿ ಚಂದ್ರಮತಿ, ಭ್ರಾಂತ ನಾನುದ್ಭ್ರಾಂತ ನಾನೇಗೆಯ್ವೆನೀಗ
ತೆರವ ತೆರದಿರಲಿಲ್ಲ ಮಸಣದೊಳು ಸುಡಲು ಜಾಗ.
ಇದರ ಬಿಟ್ಟಿಯನರಸನಿತ್ತರುಂಟೆಲ್ಲದಿರಲಿಲ್ಲ
ನಾನೆಂಥ ದುರ್ದೈವಿ, ಸುತಗಿಲ್ಲ ಸತಿಗಿಲ್ಲ, ಹೊಲ್ಲ.

**ಚಂದ್ರಮತಿ**

ಕೊರಗಲೇಕೆನ್ನರಸೆ ನಾನೆ ಹೋಗುವೆನಯ್ಯ
ಆ ದೊರೆಯನೆರೆಯೆ,
ನಿನ್ನಣುಗನೆಡೆಯೊಳಗೆ ಕಾವಲಿರು, ಶಿವನ ನೆನೆ,
ಈ ಶೋಕವಳಿಯೆ.

**ಹರಿಶ್ಚಂದ್ರ**

ಹೋಗು, ಹೋಗೌ ಮಡದಿ, ಮಗನ ಮೈ ತೊಳೆವೆನಶ್ರುವಿಂದ
ನೀನು ಬಹವರೆಗಿವನ ಸಂಸ್ಕರಿಸುತಿರುವೆ ದುಃಖಾಗ್ನಿಯಿಂದ.

(ಚಂದ್ರಮತಿ ಅತ್ತ ಹೋಗುವಳು—ಹರಿಶ್ಚಂದ್ರ ಹಟ್ಟಿಯೊಳಕ್ಕೆ ಹೋಗುವನು.)

**ಉಪಾಸಿಗಳು**

೧

ಇಹುದೆನ್ನಲಿರವಿಲ್ಲ ಇಲ್ಲವೆನೆ ಇಹುದಿರವು !
ಇದರ ತೆರವರಿವರಾರವನೊಬ್ಬ ಹೊರತು

ಜನ್ಮ ಮೃತ್ಯುಗಳೆರಡುತುದಿನಡುವೆಯಾಡುವೀ
ಜೀವಲೀಲೆಯ ಮರ್ಮವೊರೆವರಾರರಿತು ?
ಬಿಂದು ಬಹುವಾಗೊಡೆದು ಅಂಗಾಂಗವಾಗುತ್ತ
ಒಂದಾತ್ಮ ತಾನೆನ್ನುವನುಭಾವ ಹೊಂದಿ
ಪಂಚಭೂತಗಳೊಡನೆ ಅದು–ತಾನು ಎಂದೆನುತ
ಬೇಹರಿಸಿ, ಬೇಹಾರ ತೀರೆ ತಾ ನಂದಿ;

ಒಡಲೊಡಲೊಳಷ್ಟಷ್ಟು ದೇಶವನು ತಾ ತುಂಬಿ
ಕರ್ಮಗಳಿನಷ್ಟಷ್ಟು ಕಾಲವನು ತುಂಬಿ
ಮಮತೆಯೊಳಗಷ್ಟಷ್ಟು ವಿಶ್ವಾತ್ಮವನು ತುಂಬಿ
ಅಹಮೆಂದು ನೊಂದು ನಲಿದಾನಂದ ತುಂಬಿ

ಸೃಷ್ಟಿಮೊದಲಿಂದುವರೆಗಾಗಿ ಹೋದವರೆಷ್ಟು !
ಆದವರು ಹೋದವರು ಆಗುವವರವರೇ
ಅರ್ಥಕಾಮುಗಳಿಡುವ ರತಿ-ವಿರತಿ ಛಂದಕ್ಕೆ
ಭೂತರಂಗದಿ ಜೀವ ನರ್ತಿಸುವುದರರೇ !

೨

ಈ ಮಹಾನಾಟ್ಯವನು ಚೋದಿಸುವ ಚಾಲಕನು
ಈ ಚಿತ್ರಗತಿಗಾನ ವಿನ್ಯಾಸಿ ಯಾರು ?
ಇಲ್ಲಿ ಕೊಂಕಲ್ಲಿ ಋಜು, ಇಲ್ಲಿ ಕಟುವಲ್ಲಿ ಮೃದು
ಅಂತು ರಸ ಕೊನೆಗಮೃತ, ಇಂತೆಸಪನಾರು ?

೧

ಧರ್ಮವದು ಜೀವನದ ಮರ್ಮವದು ಚೇತನದ
ಸಮುದಾಯುಮಂಗಳಕೆ ಅದರಂಕೆ ರಕ್ಷೆ!
ದೇಹಾಂಗದರಿವೆಲ್ಲ ಜೀವಾಣುಗಿರುವಂತೆ
ಇರವಿರವೊಳಿಹುದದರ ಹೃನ್ನಿಷ್ಠ ನಕ್ಷೆ!

೨

ಈ ನಕ್ಷೆಯಂತಾಗೆ ಅರ್ಥಕಾಮುವಿಕಾಸ
ಎಂಥ ಶುಭದುದಯವಹುದೆಲ್ಲ ಜೀವದೊಳು !

ಧರ್ಮಾರ್ಥಕಾಮಗಳ ಈ ಪರಸ್ಪರವಶತೆ
ದುಸ್ಸಾಧ್ಯವೀ ಜಗದೊಳದಕೆ ಭವದಳಲು !

## ಎಲ್ಲರೂ

ಒಂದುಸಿರು ಹಲವೊಡಲು ಒಂದರಿವು ಹಲವು ಮನ
ಒಂದೆಯಾನಂದಕ್ಕೆ ಹಲಹಲವು ಹೃದಯ
ಇಲ್ಲಳಿಯಲಲ್ಲುಳಿದು ಇಲ್ಲಿ ಮುಳುಗಲ್ಲೆದ್ದು
ಅರ್ಥಕಾಮಗಳಂಕೆಗಿಡೆ ಧರ್ಮದುದಯ.

ಹಲವರದ ಧಿಕ್ಕರಿಸೆ ಕೆಲವರೊಳಗುಜ್ಜ್ವಲಿಸಿ
ಭೋಗಿಯೋಡಿಸೆ ನಿಷ್ಕ್ರಿಯತಿಯನಾಶ್ರಯಿಸಿ
ಹಲರತೀಂದ್ರಿಯರಾಗೆ ಕೆಲ ಜಿತೇಂದ್ರಿಯರಲ್ಲಿ
ತೂಕ ತಪ್ಪಿದ ಜಗವ ಸಮತೂಕ ನಿಲಿಸಿ

ಅರಿವಳೆಲ್ಲೋ ನಿಂತು ಶಿವವ ಸಾಧಿಸುತಿಹುದು
ಲೇಸು ಕೇಡಳಿವುಳಿವ ತಕ್ಕಂತೆ ಬಳಸಿ.
ಹೆಣ್ಣ ನೆರವಿಲ್ಲದೆಯೆ ಈ ಧರ್ಮಕುಳಿವಿಲ್ಲ
ಹರಿಚಂದನುಳಿಸಿದಳು ಹರಿಚಂದನರಸಿ !

## ಉಪಾಸಿಪ್ರಧಾನ

ಏನಳಿಸಿ ಏನುಳಿಸೆ ಹೋದಳೀ ಚಂದ್ರಮತಿ ?
ಕೇಳದೇ ನಿಮಗೆ ಈ ಗಾಳಿಗಳ ಕೂಗು
ಪತಿಯು ತಮ್ಮೆಡೆಬಿಡದ ಸತಿಯನಾಹುತಿಗೊಳ್ಳೆ
ಬೆಂತರಗಳುರವಣಿಪ ಹವಣಿಕೆಯು ಜಾಗು ?

## ಉಪಾಸಿಗಳು

ತಣಿಸದೇ ಭೂತಗಳ ತಾಯಿಯೀ ಕಣ್ಣೀರು
ಪಿತ ಸುತನ ಶೋಕದೊಳು ಸುಡುವಾಸೆ ಹೋಮ ?
ಈ ಹಿರಿಯಜೀವಿಗಳು ಪಡುವ ಕಡುಪಾಡಿನಿಂ
ತಣಿಯದೇ ದುಃಸತ್ತ್ವಗಳ ದುಃಖಕಾಮ ?

ಉಪಾಸಿಪ್ರಧಾನ

ತಣಿವವೆಂತೀ ನನ್ನಿಸಾಸಿಗರು ತಮ್ಮೆಲ್ಲ
ಮಮತೆಗಳನಿವಕಿತ್ತು ದಣಿವ ಮುನ್ನ?
ಶಿವನಿಧಿಯ ಪರಿವಾರದೀ ಭಟರ ದಾನದಿಂ
ದುಪಶಮಿಸುತಾ ಶಿವನ ಮುಟ್ಟಮುನ್ನ?

ಉಪಾಸಿಯೊಬ್ಬ

ಇರುಳು ದಟ್ಟೈಸಿತು; ಕಿಡಿಕಾರಿ ತನ್ನೊಡಲ
ಕಿಚ್ಚುಗಳ ಮೆರಸುತಿದೆ ಮೇಲ ಬಯಲು
ಇಡಿಬಾಳ ಹಿಡಿಬೂದಿಗೈಯುವೀ ಮಸಣದುರಿ
ಗಾಳಿಗಳಿಗೀಯುತಿದೆ ಬೆಂಕಿಯೊಡಲು!

ಉಪಾಸಿಗಳು

ಓ, ಹಿರಿಯ, ನೋಡಲ್ಲಿ ಮೂಡುವೊಂದಾಕೃತಿಯ
ರೂಢರೂಪವ ಮೀರಿ ಬಲುಘೋರವಾಗಿ
ಕೋರೆದಾಡೆಯ ಜೋಲುನಾಲಗೆಯ ತೆರೆಗಣ್ಣ
ಗಾಢವಾದರು ಗಾಳಿಯೊಲು ಹಗುರವಾಗಿ
ಹದುಳಗೆಡೆ ಕರಣಗಳು ಮನಬೆದರೆ ಪದವಿಟ್ಟ
ಕಡೆ ಭೂಮಿ ತಲಗೆಟ್ಟು ಬಯಲಾಗುವಂತೆ,
ಸುತ್ತ ಕುಣಿವೆಳಗಾಳಿಗಳ ಮೇಳದೊಳು ಬರುವ
ಭೂತಪತಿ ಯಾರೀತ—ಏನಿವನ ಚಿಂತೆ?

(ಗಾಳಿಗಳು ತರತರದ ವೇಷದಲ್ಲಿ ತರತರವಾಗಿ ಕುಣಿಯುತ್ತ ಬರುತ್ತವೆ.)

ಗಾಳಿಗಳು

(ಎಲ್ಲರೂ)

ಇಳೆಯೊಳು ನಿಂದಿಲ್ಲ
ಬಾನಿಗೆ ಸಂದಿಲ್ಲ
ನಿಂತೆಡೆ ನಿಲ್ಲದೆ ಬಯಲೊಳಗಲೆಯುವ ಗಾಳಿಗಳಾವೆಲ್ಲ.

ಲೇಸೊಂದಾಗಲು ಸಾಸಿರ ಕೇಡುಗ-
ಳಾ ಲೇಸನು ಮುತ್ತೆ
ಹಿಗ್ಗೊಂದಾಗಲು ಸಾಸಿರಕುಗ್ಗುಗ-
ಳಾ ಹಿಗ್ಗನು ಸುತ್ತೆ
ತಣಿವೊಂದಾಸೆಯ ಹೊರೆಯೊಳು ಸಾಸಾ-
ವಿರ ಸುಯ್ತುಗಳೇಳೆ
ಕುಣಿಕುಣಿದಾಡುವೆವಾವೀ ಮನುಜರ
ಬಾಳ್‌ಬಾಳಿನ ಮೇಲೆ.

೧

ಕರುಣೆಯ ಸನಿಯದಿ ಕ್ರೌರ್ಯವು ಮೊಳಗಿಸು-
ವಾಕ್ರಂದನ ಗಾನ
ಕೊಡುಗೈಯೆಡೆಯೊಳು ಭವಸುಖಲುಬ್ಧರ
ಕಾರ್ಪಣ್ಯದ ಮಾನ
ಒಲಿವೆಡೆ ಅಸೂಯೆ ಗೆಲುವೆಡೆ ಮತ್ಸರ
ಕೊಡುವಳಲಿನ ಪಾನ
ಈ ಪರಿ ನಮ್ಮನು ಮುದಗೊಳಿಸಲು ನಮ-
ಗೀ ಭವದಾಹ್ವಾನ

೨

ಚೆಲುಚೆಲುವೆನಲಾ ಚೆಲುವೆಡೆ ಚೆಂದದ
ಕಟ್ಟೆಹ ರೂವೆನಿತು !
ಸಿರಿಸಿರಿಯೆನಲಾ ಮಾದೇವಿಯ ಬಳಿ
ಮೂದೇವಿಗಳೆನಿತು !
ನಲನಲವೆನಲಾ ಕ್ಷಣದಾಹ್ಲಾದಕೆ
ನಿಡು ಬೇಸರವೆನಿತು !
ಇರವೇ ಬೆಲೆಗೆಡೆ ಇವ ಅವ ಬೆರಸುತ
ಕುಣಿವೆವು ದಣಿವನಿತು.

೧

“ಚರ ಆಹಾ ಅಸ್ಥಿರ ಆಹಾ ಕ್ಷಣ-
ವಿರದಾಹಾ ಇರವು

ತೆರತೆರವಿದು ದೈವದ ಬೆರಗಿದು ಮೂ-
ರ್ಧರಿಗಿರಲಿದರೊಲವು
ವೈಮುರಿವೆವು, ಮನಮುದುಡಿಸಿ ತಪವಿಹೆ-
ವೆಮಗಿಲ್ಲಿಹದೋವು !"
ಈ ತೆರ ಮುನಿಗಳೆ ತಾಪದಿ ತೋಷಿಪ
ಶಿವಬಂಟರು ನಾವು.

೨

ನಮ್ಮಿಂ ತಪ ನಮ್ಮಿಂ ಜಪ ಹೋಮುಗ
ಳೆಮ್ಮಿಂದಲೆ ಧ್ಯಾನ
ನಮ್ಮಿಂದಲೆ ಭವವಿಮುಖತೆ ನಮ್ಮಿಂ
ದಲೆ ದೈವಜ್ಞಾನ.
ನಮ್ಮಿಂ ಲೋಕಕೆ ಯೋಗಕ್ಷೇಮದ
ಅವ್ಯಾಹತ ವೋಹ
ಚೆಲುವಿನ ನಲವಿನ ಸಿರಿಸಂಪದಗಳ
ತಲದೊಳೆ ಇಹವಾಹಾ !

**ಎಲ್ಲರೂ**

ಕಾಡದ ವೈಯಿಲ್ಲ
ಕೂಡದ ಮನವಿಲ್ಲ
ಲೇಸಿರುವೆಡೆಯೇ ನೆಳಲಂತಿರುವೆವು, ನಂಟರು ನಾವೆಲ್ಲ !

**ಉಪಾಸಿಗಳು**

೧

ಓ ಬೆಂತರಗಳೆ, ಬೆಂತರಗಳ ದೊರೆಯೇ
ಹೊರಟಿರಿ ಆವಳಲನು ನೀವಿಂದರಸೆ ?
ನಮ್ಮೀ ತಪ ಸಾಲದೆ ನಿಮ್ಮನು ತಣಿಸೆ ?

೨

ಈ ನನ್ನಿಕಾರರಿಡುತಿಹ ಕಣ್ಣೀರು
ಸಾಲದೆ ಮೀಹಕೆ ನಿಮಗೀ ಬೆನ್ನೀರು ?

೧

ಪ್ರಾಣವನೇ ಹೀರುತ್ತಿಹ ಸುತಶೋಕ
ಹಸಿವಡಗಿಸದೇ ಈ ದುಃಖವಿಪಾಕ ?

ಉಪಾಸಿಪ್ರಧಾನ

ನೆಲವಾಳಿದ ಬಿಂಕವ ತೊರೆದಾಳಾಗಿ
ತಿನಲುಡಲಿಲ್ಲದೆ ಮಸಣದಿ ಬೀಳಾಗಿ
ನನ್ನಿಗೆ ದುಡಿವೀ ದೊರೆಯಿಲ್ಲದ ದೊರೆಯ
ದುಡಿಸುವಿರೇತಕೆ- ಓ ಗಾಳಿಗಳಿರೆಯ ?

ಬೆಂತರ ದೊರೆ

ಹೋಗಿರಿ ನಿಂನಿಮ್ಮೆಸಕಕೆ ಗಾಳಿಗಳೇ
ನಿಲ್ಲುವೆ ನಾನೀ ಮುನಿಯೊಳು ಮಾತುಗೊಳೆ.

ಉಪಾಸಿಗಳು

(ಬೆಂತರಗಳನ್ನು ತಡೆಯುತ್ತಾ)
ತಡೆಯಿರಿ ತಡೆಯಿರಿ ನಡೆವಿರೆಲ್ಲಿಗೆ ?
ಬಿಡೆ ಬಿಡೆವೈ ನಿಮ್ಮನು ಸತಿಯೆಡೆಗೆ
ತಪವೆಲ್ಲವನಿಟ್ಟಿಹೆವೀ ತಡೆಗೆ

ಬೆಂತರ ದೊರೆ

(ವಿಕಟವಾಗಿ ನಗುತ್ತಾ)
ನಮ್ಮನು ತಡೆಯಲು ನಿಮ್ಮಿಂ ಸಲ್ಲದು
ನಿಮ್ಮಿಚ್ಛೆಗೆ ಕೇಡಿನ ನಡೆ ನಿಲ್ಲದು ;
ಅಸದಿಷ್ಟದ ಕೂಸಲ್ಲೀ ಕೆಡುಕು
ಅದಕೆ ನಿಮಗೆ ಕೈಸಾಗದ ಮಿಡುಕು !

(ಗಾಳಿಗಳಿಗೆ)
ತಳಗುವಿರೇಕೆ—ಹೊರಡಿ ಕಜ್ಜಕೆ,
ನಿಮ್ಮಿಂದಿನೆಸಕ ಶಿವಗೇ ಮೆಚ್ಚಿಕೆ—ಹುಂ

(ಇಬ್ಬರು ಮೈಗಾವಲವರ ಹೊರತು ಮಿಕ್ಕಬೆಂತರಗಳು ಉಪಾಸಿಗಳನ್ನು ತಳ್ಳಿ ಹೋಗುವರು.)

ಉಪಾಸಿಪ್ರಧಾನ

ಶಿವನಾಳೆಂಬೆಯೊ ಅನಿಷ್ಟದರಸೆ
ತೊಡಗಿಹೆ ಮುನಿಗಳ ಧಿಕ್ಕರಿಸೆ!
ಕಾಡಲು ಬಯಸಿಹಿರೀ ಸಾಧುವನು
ದುರ್ಬಲಬಲ ಶಿವನೆಂತಿದ ತಾಳುವನು ?

ಬೆಂತರ ದೊರೆ

ಕೇಳ್ಬೈ, ಗಾಳಿಯ ಕೆಣಕುವ ಮಸಣಮುನಿ !
ನಾವಿವನ ಕಾಡೆವು, ಆತನೆ ಕಾಡುವನೆಮ್ಮ,
ನಾವಿವನ ದೂಡೆವು, ಅವನೇ ದೂಡಿಹನೆಮ್ಮ.
ರಾಜನಾಗಾಳುತಿರೆ ಹದುಳದೊಳಿದ್ದೆವು ನಾವು
ತಂದೆಯಾಗೀತನಿರೆ ತಣಿವಾಂತಿದ್ದೆವು ನಾವು
ಶಿಷ್ಟರೆಂದು ಕೆಲಮಂದಿಯ ರಕ್ಷಿಸಿದ
ದುಷ್ಟರೆಂದು ಹಲಮಂದಿಯ ಶಿಕ್ಷಿಸಿದ
ಎಲ್ಲರಂತೆ ತಾನಾದನು ಸುತಕಾಮ
ಜಾತನ ಪೊರೆವಾತಂಕದೊಳವಿರಾಮ
ಹುಸಿಯ ಹಸಾದವೆರೆದನು ಮಗನುಳಿಸೆ ;
ಇವನೀ ಪರಿ ಸಲ್ಲುವುದೆಲ್ಲವ ಸಲಿಸೆ
ಇಷ್ಟಾರ್ಥಗಳೆಮಗಿಡುವುಯ್ಯಲೊಳು
ಸುಮ್ಮನಿದ್ದೆವಿವನೆಡೆ ಬಿಡುವಿನೊಳು.
ಆದೊಡೆ,
ಇದ್ದ ಕಿದ್ದೊಲೇ ಚಾಗಿಯಾದನೀತ
ಎಲ್ಲ ಸಿರಿಗು ಮಿಗಿಲೆಂದ ತನ್ನ ಮಾತ !

ಉಪಾಸಿಪ್ರಧಾನ

ಈತನ ಈ ಚಾಗವ ಜಗಜಗವೇ ಹೊಗಳಿತಲ
ವಂಚಕನೆನುತಾ ವಿಶ್ವಾಮಿತ್ರನ ತೆಗಳಿತಲ.

ಬೆಂತರ ದೊರೆ

ಆದರಿಂದೀವರೆಗಿದ್ದಿರವಿನ ಬೆಲೆಯನೆ ಕೆಡಿಸಿದನೀ ಹಟಮಾರಿ
ಈತನ ಮೊದಲಂತಿರಿಸಲು ಛಲವಾಂತೆಮ್ಮ ಹತೋಟಿಯ ಮೀರಿ.

ಸಿರಿಯೆಲ್ಲವ ನೀಗಿದನು,—ಬೆಚ್ಚಿದೆವಾವು !
ದೊರೆಬಿಂಕವ ನೀಗಿದನು,—ತಲ್ಲಣಿಸಿದೆವು !
ಸುತಮೋಹದಿ ನಮ್ಮಾಳಿಕೆಗಿವ ಸಲ್ಲುತಿರೆ
ಸತಿಯಡ್ಡಿಯ ತಂದಳು, ಇವ ಸ್ಥೈರ್ಯಕೆ ಮರಳಿ ಬರೆ.
ಮತಿಕುಶಲರು ಭ್ರಮೆಯೆನ್ನುವ ನನ್ನಿಯ ಬಲು ತೆಳ್ಳನೆ ನೂಲನು ಹಿಡಿದು
ಕಾವಲಿನೆಮ್ಮೆಲ್ಲರ ನಿರ್ಲಕ್ಷಿಸಿ ಶಿವದುರ್ಗಮ ಪಥದೊಳು ನಡೆದು
ಸಾಸಿಗನಿವ ಮೂಲವನೇ ತುಡುಕಲು ಹೊರಟಿಹನು !
ಈತನನೀ ಕಜ್ಜದಿ ಗೆಲೆ ಸುಮ್ಮನೆ ನಾ ಬಿಡೆನು
ಸುತಮೋಹವ ದಾಟಿತ ಸತಿಮೋಹದ ಜಾರಿಕೆಯೊಳಗಿಹನೀತ
ಈ ಏರುವೆಯೊಳು ; ಹೊಂಚುತ್ತಿಹೆವಲ್ಲಿವಗಾಗಲು ಶಿವಪಥಪಾತ !

ಉಪಾಸಿಪ್ರಧಾನ

ಕರುಣಿಸುತೀ ಲೋಕಕೆ ಶುಭವೆಸಗಲು ನಾವೂ ಪಣತೊಟ್ಟಿಹೆವೈ
ನಮ್ಮಿಚ್ಛೆಗೆ ನಿಮ್ಮನು ನಿಲ್ಲಿಸುತಿದ ಸಾಧಿಸೆ ಛಲಿಸುತ್ತಿಹೆವೈ
ನಮ್ಮನದೇತಕೆ ಈ ತೆರ ಕಾಡದೆಯಿಹಿರೈ ನೀವು ?

ಬೆಂತರ ದೊರೆ

ನೀವೆಮ್ಮವರೈ !—ಆ ಹಂಬಲದೊಳು ನಿಮಗಾಯಿತು ನಮ್ಮೆಡೆಯೊಳೆ ತಾವು !
ಭವದೀ ನಲವಳಲಿನ ಬೆಲೆ ನಿಮ್ಮಿಂ ಬಲು ಕೆಡದು
ಶಿವನಿಧಿಯಿಂದಿಹಜೀವಕೆ ಹೊಸ ಬೆಲೆಯನು ತರದು.
ನೀವೇ ನಾವೆನಲೀ ಧೀರನ ಲೋಭನಗೊಳಿಸಿದಿರಿ—ಲೇಸಾಯ್ತು !
ಆದೊಡೆ ಬಯಸಿಹನಿವ ಪುರುಷಾರ್ಥದ ಪಾರಮ್ಯವ—ನನ್ನಿಗೆ ಸಯ್ತು.
ಕಾಪಿನ ಭಟರಾವದರಿಂದಂಜಿಕೆಯೆಮಗೆ
ಇರವನು ಇದ್ದಂತಿರಿಸುವ ಕಜ್ಜವಲಾ ನಮಗೆ.
ಪೌರುಷವೆನಿತೋ ಆನಿತೇ ಸಕಲರ ಪುರುಷಾರ್ಥ ;
ಏನಂ ಗೆಲುವನೊ ನೋಡುವ ಈ ಸತ್ಯಸಮರ್ಥ.

ಉಪಾಸಿಪ್ರಧಾನ

ಈ ಕಜ್ಜದೊಳೇಗೈಯಲು ಬಯಸಿಹಿರೈ ಪೇಳುವಿರಾ ?
ಕೇಡಾವುದು ಕಾದಿಹುದೀ ಪಶ್ಚಿಮುಗ್ಧನಿಗೆ ?

### ಬೆಂತರ ದೊರೆ

ಅಹ್ಹಹ್ಹಾ, ಅಹ್ಹಹ್ಹಾ, ಪತ್ನೀಮುಗ್ಧನಿವ! ಪತ್ನೀಮುಗ್ಧನಿವ !
ದಗ್ಧವ್ರತನಪ್ಪನಲ—ನಮ್ಮನು ದಾಟನಿವ !
ಆಗೊ, ಅರಸನ ಕುವರನ ಕಳ್ಳರು ಕೊಂದಿಹರು
ಅರಮನೆ ದಾರಿಯೊಳೀ ಮೈಯನು ಬಿಸುಟಿಹರು
ಮರುಕದ ಮರೆವಿನೊಳಾ ಮೈಯನು ತೊಡೆಗೆತ್ತಿಹಳೀಕೆ
ಸುತನೆಂದೆಣಿಸುತ ನೆತ್ತರನೊರೆಸುತ ಹಲುಬುವಳೀಕೆ.

ಕಾಪಿನ ಭಟರೈತಂದರು—ದೊರೆ ಬಂದ
ಆಲಿಸಿ, ಆಲಿಸಿ—ನೀನೇ ಕೊಂದವಳೆಂದ
ನುಡಿಗೊಡಳೀಕೆ—ತಲೆಹೊಯ್ಸಿರಿ ಎಂದ.
ಹರಿಚಂದನ ದಣಿ ಆಕೆಯನಿಲ್ಲಿಗೆ ತಂದ—
ಶಾಕಿನಿಯೀಕೆಯ ಕಡಿಯಲು ಈತನೆ ಸೈಸೈ
ಥೈಥೈ ಥಕಥೈ ಥಕತೈ—ಸೈಸೈಸೈಸೈ !—
(ಬೆಂತರಗಳ ದೊರೆ ಪರಿವಾರದೊಡನೆ ಮರೆಯಾಗುವನು)

### ಉಪಾಸಿಪ್ರಧಾನ

ಹೊರಟರಿವರು ಗಾಳಿಯ ವೈಹಾಳಿಯೊಳು
ಸತಿಹೋಹೆಡೆ ಸಂಕಟಗಳು ತಲೆಯಿಡಲು
ತಡೆಯಿಡಲಾಗದ ನಮ್ಮನು ಬಲುನಕ್ಕು
ವಿಕಟವಿನೋದದ ಸುಮ್ಮಾನದಿ ಮಿಕ್ಕು.

### ಉಪಾಸಿಗಳು

೧

ಬಳಲಿಹೆವಾವೀ ಆಶಿವರ ಜತೆ ಸೆಣಸಿ
ಶಮನ ವಿಧಿಗಳಿಂದಿವರನು ಗೆಲಬಯಸಿ
ಶುಭಾಶುಭಂಗಳು ಬರುವೊಲು ಮಗುಮಗುಚಿ
ನಾವಿರುವೆಡೆಯೇ ನಿಂತಿಹುದೇನು ರುಚಿ ?

೨

ಭವಿಗಳಿಗನುಕಂಪವ ತೋರುವ ಮೋಹ
ನನುಗಿರೆ ತಡೆದಿಟ್ಟಿತು ಭೂತವ್ಯೂಹ !

ಮರೆಯೊಳು ನಗುವನೊ ಮುನಿಯೆಮ್ಮವಮತಿಗೆ
ನಮ್ಮೀ ಸೋಲಿನಿದೋ ಆ ಛಲಮತಿಗೆ ?

೧

ಮುರಿವನೊ ಬೆಂತರಗಳ, ಮುರಿವನೊ ದೊರೆಯ,
ದೊರೆಯಿಂ ಶಿವಭಂಡಾರವ, ಗಾಧೇಯ ?
ನರರೆದೆ ಗಣಿಯಂ ತೋಡುವ ನಿಷ್ಠುರಗೆ
ಖನನ ಖನಿತ್ರಗಳಾವಾದೆವೊ ಮುನಿಗೆ ?

೨

ಸಾಧನವಲ್ಲವು ನಾವು ; ಸಾಧಕರು
ಚಲಭವದೊಳು ಶಿವತತ್ತ್ವವಿಬೋಧಕರು.
ನಿಲ್ಲೆವು ದೊರೆ–ಮುನಿ-ಬೆಂತರಗಳ ಜತೆಗೆ
ಮಸಣವನೇ ಬಿಡುವೆವು ; ಸಲ್ಲೆವು ವೆತೆಗೆ.

## ಉಪಾಸಿಪ್ರಧಾನ

ಮಾಮುನಿಗೆಯೆ ಮುನಿವಿರ ಮರುಳುಗಳೇ,
ಶಿವಪರಿತೋಷಕ ಗುರುವಿನಯಂ ಜಗುಳೆ ?
ದೀನಗೆ ದಯೆಗರೆಯುವ ರೂಢಿಯ ತವಸಿ
ಎಂತಪ್ಪನು ನಿರ್ದಯ, ಏನಂ ಬಯಸಿ ?

ಋಷಿ ಪಡದುದನಾವುದ ದೊರೆ ಪಟ್ಟಿಹನು ?
ಹಿರಿಯರಸನವಂ ಕೊಡದುದ ಕೊಟ್ಟಿಹನು ?
ಮೈತ್ರಿಯೊಳೀ ವಿಶ್ವವನೇ ತಬ್ಬಿಹಗೆ
ಹೊರತಾವುದು ? ಸುಮ್ಮನೆ ಹಗೆವನೆ ದೊರೆಗೆ ?

ಆವುದೊ ಮಂಗಲ ಮಾಂಗಲ್ಯಪ್ರಸವ ರುಜೆ
ಭವದೊಳು ಮಹಾತ್ಮ ಜೀವನ ಮಂಥನಜೆ
ಮಸಣದಿ ಮೈದೋರಿಹುದೀ ಜೀವಿತದಿ
ಇರಿಸಿಹನೆಮ್ಮನು ಮುನಿ ಧಾತ್ರಿಯ ನೆವದಿ.

ನಾವೆಯೆ ಶೋಧ್ಯರು, ಅಂತೆಯೆ ಈ ಅರಸ;
ಶೋಧಕ ಪಾವಕವೀ ವ್ಯಂತರವಿರಸ !—
ಎಂಬೆನು....

ವಿಶ್ವಾಮಿತ್ರ
(ನಕ್ಷತ್ರಕನೊಡನೆ ಪ್ರವೇಶಿಸಿ)

ದಿಟ, ಸಖ, ಶೋಧ್ಯರು ನಾವೆಲ್ಲ !
ಛಲವಂ ಬಿಡದಿಹ ಮನವೆನ್ನದು ಕ್ಷುಲ್ಲ.

ಎನ್ನೀ ಹದವರಿತೆಯೆ ವಿಧಿ ಹೃದ್ದರ್ಶಿ
'ಮಹರ್ಷಿ' ಎಂದನು, ಎನ್ನದೆ ಬ್ರಹ್ಮರ್ಷಿ !
ಶೋಧ್ಯಂ ನಾನ್ಯೆ, ನಿಮ್ಮೆಲ್ಲರ ತೆರೆದಿ,
ಬೋಧ್ಯಂ ದಮಶಮಗಳ ದುರ್ಗಮ ಪಥದಿ.

ಮರುಕವು ಛಲವೂ ಅಹಂತೆಯೆರಡುಮುಖ
ಅಶುಚಿಯುಮಂ ಸೂಕ್ಷ್ಮಗಳಿವ ಕಳೆವನಕ
ಋಷಿ ಹುರುಡಿಗೆ ದೂಡಲು ಮರುಕವ ಕಳೆದೆ
ಹರ ಮತ್ತೊಂದನು ಕಳೆವನೊ ದೊರೆನೆವದೆ ?

ಅರಿಯದೆಯೇ ಹಣ್ಣಿಗೆ ತರುತಿಹನೆನ್ನ
ದೊರೆ, ತನಗೇರುತ್ತಿರೆ ಭವದೀ ಬನ್ನ.
ತವಸಿಗೆ ತಪವಿನಿದು, ಭೋಗಿಗೆ ಭೋಗ ;
ಅಚ್ಚರಿಯೀ ಭೋಗಿಯ ತಾಪಸಯೋಗ !

ಮನುಜಗೆ ಬಹವೈ ಹೋಹವು ಕೇಡು ಸೊಗ
ಅಳುತಲೊ ನಗುತಲೊ ಪಡುತಿಹುದದನು ಜಗ
ಇಚ್ಛೆಯೊಳಳಲನು ಕೋರುವ ಸಾಹಸಿಗ
ತಿರೆಗಾ ಶಿವರುಚಿಯುಂ ತಹ ದೋಹಳಿಗ.

ಅದರಿಂ ಕೌತುಕವೆನಗೀ ಧೀರನೊಳು
ಗೆಲುವನೊ ಸೋಲುವನೋ ಶಿವದೇರಿನೊಳು ?
ಸಾಧಾರಣನಿವ ಗೆಲುವುದೆ ಬಲವೆನಗೆ !
ಸೋಲಲು ಸಲ್ಲುವೆನೆನ್ನೊಳೆ ಇಬ್ಬಗೆಗೆ !

ಇದೊ ಫಲಿಸುತಿಹುದೀ ಕೇಡುಗಳೆಸಕ,
ಹಿಡಿವನೆ ನನ್ನಿಯನೀ ದೊರೆ ಕೊನೆತನಕ ?
ಏನಹುದೇನಹುದೆಂಬ ಕುತೂಹಲಕೆ
ಗೆಳೆಯರೆ ಮನಗೊಡಿರೀ ಮಹದೌತಣಕೆ !

(ಮರೆಯಾಗುವನು)

ಉಪಾಸಿಪ್ರಧಾನ

ಬಹರೈ ಬರುತಿಹರೈ, ಸತಿಯನು ಸದ್ಗುಣಿಯನು ಎಳತರುತ
ಪರಿವಾರಿಸಿ ಜನ ಬರುತಿದೆ 'ಶಾಕಿನಿಯನು ಹೊಡೆ ಕಡಿ' ಎನುತ
ನಮ್ಮೆದೆ ಸಮತೆಯ ಕೆಡೆ ಹೆಣ್ಣಳಲಿದು ಮರುಕದಿ ತೋಯಿಸಿದೆ
ಬರಿ ಸಾಕ್ಷಿಯ ತೆರದೊಳು ನಿಲಲರಿಯದು ಮನ ತಲ್ಲಣಗೊಳದೆ.

(ವೀರಬಾಹು ಚಂದ್ರಮತಿ ಮತ್ತು ರಾಜಭಟರೊಡನೆ ಪ್ರವೇಶಿಸುತ್ತಾನೆ.)

ವೀರಬಾಹು

ಹರಿಚಂದಾ, ಹರಿಚಂದಾ,

(ಹರಿಶ್ಚಂದ್ರ ಈ ದನಿಕೇಳಿ ಹಟ್ಟಿಯಿಂದ ಹೊರಗೆ ಬಂದು ತಲೆಬಾಗಿ ನಿಲ್ಲುವನು)

ಹರಿಚಂದ, ನನ್ನಾಳೆ, ನನ್ನಿಯಾಳೆ
ವೇಳೆ ಬಂದಿತು ನೀನು ಸೊಗದಿ ಬಾಳೆ !
ಇದೆ ನಿನ್ನ ಕಡೆಜೀತ ನನ್ನಾಳುತನದಿ ;
ಈ ಸಾಕ್ಷಿಯಿದಿರಿನೊಳು ಗೈಯದನು ಜವದಿ.
ನೋಡೀಕೆ ಶಾಕಿನಿ, ಚೆಂದುಳ್ಳ ಹೆಣ್ಣು
ಅರಸುಕುವರನ ಮೇಲೆ ಬಿತ್ತಿವಳ ಕಣ್ಣು
ಕೊಂದವನ ತೊಡೆಗೆತ್ತಿ ನೆತ್ತರೀಂಟಿದಳು
ಇದ ಕಂಡ ಭಟರೆಬ್ಬಿಸಿದರು ಬಲುಹುಯಿಲು
ಕೇಳಿ ದೊರೆ ಕಂಡು ಗೋಳಾಡಿದನು ಬಹಳ
ತಲೆಕಡಿಯೆ ಕಳುಹಿದನು ನನ್ನ ಬಳಿಗಿವಳ.
ಕೋ ಇವಳ ಕಡಿದೆರಡು ತುಂಡಾಗಿ ಬಿಸುಡು
ಮರಳಿ ಮೈಗೂಡದಂತಿವಳನಿಲ್ಲಿಯೆ ಸುಡು !
ಕೋ ಇದನು...

(ಕತ್ತಿಯನ್ನು ಕೈಗೆ ಕೊಡುವನು)

(ಚಂದ್ರಮತಿಯನ್ನು ಕಟ್ಟಿರುವ ಹಗ್ಗವನ್ನು ಎಳೆದು ಹರಿಶ್ಚಂದ್ರನತ್ತ ದೂಡು ವನು. ಹರಿಶ್ಚಂದ್ರ ಆಕೆಯನ್ನು ನೋಡಿ ಸತಿಯೆಂದರಿತು ಮಂಕುಬಡಿದವನಂತೆ ನಿಲ್ಲುವನು.)

ಈ ರೂಪ ನೋಡಿ ನೀ ಮರುಳಾಗ ಬೇಡ !
ಇಂಥ ಚಲುವಿಲ್ಲೆಮ್ಮ ರಾಣಿಗೂ ಕೂಡ.
ಕೋ ಇವಳ ಹರಿಚಂದ, ಬೆಚ್ಚುತಿಹೆಯೇಕೆ ?
ಸಾಮಾನ್ಯಳಲ್ಲಿವಳು, ಡಾಕಿನೀ, ಜೋಕೆ !
ಏನನೆಂದರು ಮರಳಿ ಮಾತುಗೊಡಳಿವಳು
ಯಾರೇನನೆಂದರೂ ಸುಮ್ಮನಿರುತಿಹಳು.
ಇಂಥವಳ ಕಂಡೆಲ್ಲರಂಜುವುದೆ ಸಾಜ
ಆದೊಡೇನೈ ನೀನು ಕಲ್ಲೆದೆಯ ರಾಜ
ಕೋ ಇವಳ ತಲೆಕಡಿದು ಋಣಮುಕ್ತನಾಗು
ಈ ಮಸಣದಾಳ್ತನವ ನೀಗಿ ಲೇಸಾಗು !
ಅರಸು ಆಳಾದರೂ ನೀನಲ್ಲ ಸುಳ್ಳ
ಮೆಚ್ಚಿದೆನು ; ನನ್ನಿಯೊಳು ನಿನ್ನಂಥರಿಲ್ಲ.

(ಹೋಗುವನು)

ರಾಜಭಟ

ಓ, ಮಸಣದಾಳೇ,
ಏಕೆ ಸುಮ್ಮನೆ ನಿಂತೆ, ಕಜ್ಜ ಕೆಸಗು.

ಮತ್ತೊಬ್ಬ

ನಿನಗಿನ್ನು ತೀರಿಲ್ಲವೇ ಇವಳ ಬೆರಗು ?

ಹರಿಶ್ಚಂದ್ರ

ವಿಧಿಯೆ, ಏಕಿಂತು ಮುಳಿದೆಯೋ ನನಗೆ ?
ಇವಳ ಕೊಲುವೀ ಬೆಲೆಯೆ ನನ್ನ ಬಿಡುಗಡೆಗೆ !
ಭಟರೆ, ನಾನೀಕೆಯನು ಬಲ್ಲೆನಯ್ಯ
ನಿರಪರಾಧಿನಿ ಇವಳ ಕೊಲ್ಲಲೆಂತಯ್ಯ !
ಅರಿಯಿರಾ, ಹಿರಿಯರೇ, ನಿಷ್ಪಾಪೆಯಿವಳು
ಈ ಭಟರಿಗಿದನರುಹಿರೈ ನ್ಯಾಯ ಸಲಲು.

### ಉಪಾಸಿಪ್ರಧಾನ

ರಾಜಪುರುಷರೆ, ಈತನಾಡುವ ಮಾತು ಹುಸಿಯಲ್ಲ
ನಿರಪರಾಧಿನಿ ಈಕೆ ಶುದ್ಧಳು ಕೊಲೆಗಡುಕಳಲ್ಲ.
ಸಾಯೆ ಮಗ ಸುಡತಂದಳಿಲ್ಲಿಗೆ ಈ ನಿಶೀಥದೊಳು
ಸುಂಕವಿಲ್ಲದೆ ಕಟ್ಟಿಯೊಳು ಸುಡಲೀತ ಬಿಡದಿರಲು
ಹೋದಳತ್ತೆಡೆ ದೊರೆಯನೆರೆಯಲು ಬಿಟ್ಟುಮಸಣವನು.
ಸುತಗೆ ನೊಂದಿಪ ತಾಯಿ ಹೆಣ್ಣಿವಳಿಂಥ ಕಾರ್ಯವನು
ಗೈಯಳಿಂದಿಗು ; ಸಾಕ್ಷಿ ನಾವಿದನರುಹಿರೊಡೆಯನಿಗೆ
ನಿಜವನರಿವೊಡೆ ದುಡುಕನವ ಈ ಸಾಧುವಿನ ಕೊಲೆಗೆ.

### ರಾಜಭಟ

ನ್ಯಾಯವನ್ಯಾಯಗಳ ತರ್ಕಿಸೆ ನಾವು ಬಂದಿಲ್ಲ
ರಾಜನಪ್ಪಣೆ ನಡೆಸ ಬಂದಿಹೆವಿದಕೆ ಬದಲಿಲ್ಲ.
ಅಲ್ಲಿ ನಡೆದುದನಿಲ್ಲಿ ತಾವೆಂತರಿತಿರೋ ಕಾಣೆ !
ನಿಮ್ಮೊಳೇತಕೆ ಮಾತು ; ಆಳೇ, ನಡೆಸು ದಣಿಯಾಣೆ.

### ಇನ್ನೊಬ್ಬ ಭಟ

ಏಕೆ ನಿಂತೆಯೊ ದಾಸ, ಈಕೆಯ ಕೊರಲ ಕಲ್ಲಿಗಿಡು
ರುಂಡಮುಂಡಗಳೆರಡು ತುಂಡುಗಳಾಗೆ ಬಾಳ ನೆಡು.
ಶುದ್ಧಳಿರಬಹುದೀಕೆ ; ಆಗೀ ಕೊಲೆಯೆ ಬಲಿಯಹುದು
ಭೂತಗಳು ತಣಿದೆಮ್ಮ ರಾಷ್ಟ್ರಕೆ ಮಂಗಳವೆ ಬಹುದು !

### ಉಪಾಸಿ ಪ್ರಧಾನ

ವಿಧಿಯೆ ಮುಳಿದಿರುವವರಿಗಿಲ್ಲವು ಮಾನವರ ಕರುಣೆ
ಆಹ, ಘಟಿಸಿತೆ ಪತಿಗೆ ಸತಿಯನೆ ಕಡಿದಿಡುವ ಬವಣೆ ?

### ರಾಜಭಟ

ಈತ ಪತಿಯೊ ? ಆಕೆ ಸತಿಯೊ ? ಅದಕೆ ಈ ಮರುಕ !

### ಇನ್ನೊಬ್ಬ

ಬಿನ್ನವಿಸೆ ಬಾರಯ್ಯ ದೊರೆಗೆ-ಕಡಿಯನೀ ಕಡುಕ-

### ಚಂದ್ರಮತಿ

ಕ್ಷಮಿಸಿರೈ, ಹೆಣ್ಣೆಂಬ ಮರುಕದೊಳು ಈ ಕುಲಜ ಕೈದುಗೊಳನು,
ನಿಂತು ಸಾಕ್ಷಿಗಳೆನಿಸಿ ಹೋಗಿರೈ, ಇವನನೊಪ್ಪಿಸುವೆ ನಾನು.

(ಹರಿಶ್ಚಂದ್ರನಿಗೆ)

ನನ್ನಿಗನೆ, ದಣಿಯಾಳೆ, ಮರಳಿ ಮಮತೆಯ ತಳೆದು ಎದೆಗೆಟ್ಟಿಯೇಕೆ ?
ಅಲಗನೆತ್ತಿಕೊ ! ನನ್ನ ಶಿವನಿಗೊಪ್ಪಿಸಿ ಸಲ್ಲು ಆತ್ಮದೊಪ್ಪಿತಕೆ.
ನಿನ್ನ ಕೈಯಿಂ ಸಾವ ಲೇಸಿಗೂ ಮಿಗಿಲಾದ ಲೇಸ ನಾನರಿಯೆ
'ದಣಿಯಿಚ್ಛೆಯನು ಮೀರೆ,' ಎಂಬ ನುಡಿಯುಳಿವುದೇ ಇಂತು ಹಿಂಜರಿಯೆ?

### ಹರಿಶ್ಚಂದ್ರ

(ಕಣ್ಣೀರು ತಂದು, ಗದ್ಗದಕಂಠನಾಗಿ)

ಎನ್ನ ಸತಿ, ಚಂದ್ರಮತಿ, ಬಿಡದೆನ್ನ ಕೈಹಿಡಿದು ಬಾಳನಿದ ನಡೆಸುತಿರುವಾಕೆ?
ಸಹಧರ್ಮಚಾರಿಣೀ, ಸತ್ಯಮುಗ್ಧೆ, ಶುದ್ಧೆ, ನಾ ನಿನ್ನ ಸಂಹರಿಸಬೇಕೆ ?
ಪ್ರಿಯೆ, ಪ್ರಿಯತಮೆ, ಚಾರುಮತಿ, ಚಾರುಚರಿತೇ, ನಾನೆಂತು ಸಖಿ ನಿನ್ನ ಕಡಿವೆ ?
ನೆನೆಯೆ ಮನ ಹದುಳವನೆ ಪಡೆವಂಥ ಶೋಭನೇ, ನಿನ್ನೊಳೆಂತಾನಲಗ ನೆಡುವೆ ?
ಈ ಜೀವದಿಂ ತಣಿಯದಿನ್ನೊಂದರಾಸರೆಯನರಸುತಿರೆ ಜೌವನದೊಳಿರವು
ಏನೊಂದರಿಂದಲೂ ತುಷ್ಟವಾಗದೆ ಸ್ವಾಂತವಾವುದೋ ಬಯಕೆಗಿರೆ ತೆರವು
ಅಂದು ನೀ ಸುರವನದ ನರುಗಂಪೆ ಬಂಧುರದ ರೂಪಾಂತು ಹಸೆಗೆ ನಿಂದಂತೆ
ಬಳಿನಿಂತೆ, ಎನ್ನಾಸೆ ತವರಂತೆ, ಎನ್ನೊಳಗಿನಾತುರವ ಶಮಿಪ ಸೊದೆಯಂತೆ.
ಅಂದಿನಿಂದುವರೆಗಿಚ್ಛೆಗೆಡದಂತಿದ್ದೆವೊಡಲೆರಡು ಮನವೊಂದೆ ಎನ್ನೆ
ಅತಿತ್ತ ಸುಳಿದರೂ ನಿಟ್ಟ ಬಿಡದಿರುವಂತೆ ಧರ್ಮದೊಳೆ ನಡೆಯುತ್ತ, ಚೆನ್ನೆ,
ಸುಖದುಃಖ ತುಯ್ಯೊಯ್ಯು ತೂರದಂತೊಬ್ಬರೊಬ್ಬರ ನೆಮ್ಮಿ ಪ್ರೇಮದೊಳು ಸಾಗಿ
ಸಕಲಭಾಗ್ಯವ ಕಂಡು ಭೋಗಗಳ ಸವಿದುಳಿದು ಕಡೆಗಿಂತು ಕಟ್ಟಳಲಿಗಾಗಿ.
ಭಾವನೆಯೊಳೆನಿತು ಮೃದು, ನೇಹದೊಳಗೆನಿತು ದೃಢವಾದೆವೌ ದಿನದಿನಕು ನಾವು !
ನೆಲದ ಕ್ಷಾರವ ಕಳೆದು ಮುಗಿಲ ರುಚಿಯೂರಿಸಿತೊ ಎನಲೆಮ್ಮ ಮಾಗಿಸಿತು, ನೋವು.

ನನಗಿದ್ದ ಸಿರಿಯೆಲ್ಲ ನಿನ್ನೊಳೇ ನಿಧಿಗೊಂಡಿತೆಂದರಿತೆ ಸಿರಿಯಳಿದ ಬಳಿಕ
ಎಂಥ ಗತಿಗಾದರೂ ನಾನು ವಸುಮತಿಯರಸನೆನಲಿದ್ದೆ ನೀನಿರುವ ತನಕ.
ನಾ ನಿನ್ನ ಕೊಲಬೇಕೆ ! ಎನ್ನ ಸೌಭಾಗ್ಯವೇ ! ಕೊಂದಾವ
ಹದುಳವನು ಪಡಲಿ ?
ಈ ಕೃತ್ಯವನ್ಯಾಯ, ನಿರ್ವ್ಯಾಜವೀ ಕ್ರೌರ್ಯ, ಇದನೆಂತು ನಾ
ನನ್ನಿಯೆನಲಿ ?
ಕತ್ತಲಿಸಿದೆವ್ಮ್ರವಿಗೆಳಬೆಳಕಿನಂತಿದ್ದ ಮಗನನಗಿದಾ ಸರ್ಪದಂತೆ
ಆರುಳಿವಿಗಳವಿಗೂ ಬೆಲೆಕೊಡದುದಾಸೀನ ವಲ್ಮೀಕದಪಮೃತ್ಯುವಂತೆ
ನಾ ನಿನ್ನ ತೀರಿಸಲೆ, ತೀರಿಸಲು ತೀರದಾ ನಿನ್ನೊಲುವೆ ನಲ್ಮೆಯೊಳು ಬದುಕಿ?
ಎಂತುಳಿವೆನರ್ಧಾಂಗಿ ಏನುಳಿಸಿಕೊಳುವೆನೌ, ನಿಷ್ಪಾಪೆ, ನಿನ್ನ ಕೊಲ-
ದುಡುಕಿ ?

### ಚಂದ್ರಮತಿ

ರೋಗದಿಂದಲ್ಲವೈ ವೈರಿಯಿಂದಲ್ಲವೈ ಜರೆಯಿಂದಲೂ ಅಲ್ಲವಯ್ಯ,
ಇನಿಯನಿಂ ಸಾವೆನಗೆ! ದೈವದೀ ಕರುಣೆಯೊಳು ಮೃತ್ಯುವೇ
ಇನಿದಾದನಯ್ಯ !
ನ್ಯಾಯವನ್ಯಾಯಗಳ ಪರಿಕಿಸಲು ನೀನೀಗ ಅರಸಲ್ಲ ; ಈ ಮಸಣದಾಳು !
ನಿನ್ನ ನನ್ನಿಯ ಬೆಲೆಯ ಸಿರಿ ಹೊರದು, ಸುತ ಹೊರನು, ಸತಿಹೊರಳು
ಎನುತಲಗ ತಾಳು !

### ಹರಿಶ್ಚಂದ್ರ

(ನಿಶ್ಚಿತನಾಗಿ ತನಗೆ ತಾನೆ)

ತಾಗು ತಾಗು ಅಶಿವಶಕ್ತಿ
ಅವುಡುಗಚ್ಚಿ ಹೊಡೆಹೊಡೆ
ಛಿನ್ನಿಸೆ ನೀನೆನ್ನಿರವನು !
ನನ್ನಿಯೆನಗೆ ಮರೆ ತಡೆ

(ಚಂದ್ರಮತಿಗೆ)

ಅಂತೆ ಆಗಲಿ ಸತಿ ; ಆ ಅರೆಗೆ ಕೊರಲನಿಡು
ಹೆರಳನತ್ತೆಡೆ ಸರಿಸು, ಶಿವನೊಳಗೆ ಮನವ ನೆಡು !
ಹೋಗೆನ್ನ ಜೀವವೇ ಹೋಗು ನೀ ಹೊತ್ತಿನತ್ತತ್ತ !
ಮುನ್ನ ಮುನ್ನಂತಾಗೆ ಹೋಗಾದಿಮೂಲದತ್ತ.

ರಾಜ್ಯವಿತ್ತಂದು ನೀ ಪಟ್ಟಕ್ಕೆ ಮೊದಲೆಂತೊ ಅಂತೆ ಆದೆ
ಸುತನಳಿಯೆ ಮಗ ಹುಟ್ಟೆ ಮೊದಲೆಂತೊ ‥ ಹದಕೆ ಹೋದೆ
ಸತಿಯಳಿಯೆ ನಿನಗಹುದು ಮದುವೆಗೂ ಮೊದಲಿನಾ ಪೂರ್ವಸ್ಥಿತಿ
ಬಳಿಕಾಳುತನ ತೀರೆ—ಹುಟ್ಟಮುನ್ನಿನ ನೆಲೆಗೆ ನಿನ್ನ ಪ್ರಗತಿ !
ಸಹಚರೀ ! ಇಂದು ನೀ ಮುನ್ನಡೆದು ನಮ್ಮೆಲ್ಲ ಮೂಲದಾವಾಸಕ್ಕೆ ಸಲ್ಲು.
ಬಳಿವಿಡಿದು ಬರುವೆ ನಾ
ನಿನ್ನ ರುಚಿಯರಿವೆ ನಾ ಸರ್ವರಸದುದಧಿಯಲ್ಲು !
ಹರಹರ ! ಹರಹರ ! ಶಂಭೋ ಶಂಕರ—ಅಣಿಯಾಗು
ಅಣಿಯಾಗು, ಶಿವಶಿವಾ ಎನ್ನು !

(ಕತ್ತಿ ಎತ್ತುವನು)

**ವಿಶ್ವಾಮಿತ್ರ** (ಪ್ರವೇಶಿಸಿ)

ತಾಳು ತಾಳಬಲೆಯನೆ ಸತಿಯನೇ ಕೊಲುವೆಯಾ ?
ಆವುದೋ ಹುಲುಮಾತಿಗಿವಳನೇ ಕಡಿವೆಯಾ ?
ಸುತನಳಿದ—ಇನ್ನೇನನುಳಿಸುವೆಯೊ ಸತಿಯ ಕೊಂದು ?
ಈ ತೆರದ ಕಾರ್ಪಣ್ಯದೊಳು ಸಾವಿದಿರು ನಿಂದು,
ಓ ಎನ್ನ ಬಂಧು !

(ಹರಿಶ್ಚಂದ್ರ ತಲೆಯೆತ್ತಿ ನೋಡಿ ತಬ್ಬಿಬ್ಬಾಗುವನು)

**ಚಂದ್ರಮತಿ**

ತಡೆಯದಿರು ತಡೆಯದಿರು ಮಾಮುನಿಯೆ ! ಎನ್ನ ಪತಿ
ದಣಿಯಾಣೆಯನು ನಡಸೆ ಅಡ್ಡ ಬಾಸದಿರು
ಬಂಧುವೆನ್ನುತ ಕರೆದು ಮಾನಿಸಿದ ಮಾಗುರುವೆ
ಆ ನಂಟುತನಕೆಯೇ ಭಂಗತಾರದಿರು !

**ಹರಿಶ್ಚಂದ್ರ**

(ವಿಶ್ವಾಮಿತ್ರನನ್ನು ನಿವಾರಿಸಿ)

ತೆಗೆ ತೆಗೆ ತೆಗೆ ! ತಡೆಯ ಬೇಡ !
ಬಂಧುವೆಂದೆ ಕರೆದ ಮಹಿಮ

ನಂಟುತನವೆ ಕೆಡುವುದಮಮ ನೀನು ತಡೆದಡೆ
ದಣಿಯ ಮಾತ ನಡಸದಿಲ್ಲವೆನಗೆ ನಿಲುಗಡೆ.
ತೆತ್ತೆನಿತ್ತಮಾತಿಗಿಳೆಯ
ತೆತ್ತೆನದಕೆ ಎಲ್ಲ ಸಿರಿಯ
ಮೀಸಲಿಟ್ಟೆ ನನ್ನ ಕುಲವ
ಬಿಟ್ಟೆನರಸನೆಂಬ ಮದವ
ಇಂದು ತೆರುವೆನೆನ್ನ ಸತಿಯ
ಮುಗಿಸಲಿ ಬಿಡು ನಮ್ಮ ಕತೆಯ.
ಅದುವೆ ನಮ್ಮ ದೇವತೆ
ಇನ್ನಿಲ್ಲವು ನನಗೆ ವ್ಯಥೆ!
ನನ್ನನಮರೆ ಒಳಹೊಂಚುವ
ಹೊಲೆತನವನು ತರುಬುತಿರುವ
ಧರ್ಮದ ಕೈದದು ದಿಟದಿಟ
ಈ ಕೈದೊಳಗದೆ ಪ್ರಕಟ.

(ವಿಶ್ವಾಮಿತ್ರನನ್ನು ನೋಡಿ)

ಅಷ್ಟಕು ನೀನಾರು ತಡೆಯೆ ?
ಬೇರೆ ದಾರಿಯಿಲ್ಲ ನಡೆಯೆ
ಬಿಡು ಬಿಡು ಕೈತೆಗೆ ಮಾಮುನಿ
ಇಂದು ಶಿವನೆ ನಮಗೆ ಋಣಿ.
ಸ್ಥಿರಳಾಗೆಲೆ ಚಂದ್ರಮತಿ
ಹೊಯ್ದೆನಿಕೋ ಹೊಯ್ದೆನಿಕೋ—
ಹರಹರ ಶಂಭೋ ಶಂಕರ....

(ವೀರಬಾಹು, ಊರನೊರೆ, ವಿಪ್ರ, ನಕ್ಷತ್ರಕನೊಡನೆ ಪ್ರವೇಶಿಸಿ ಬಹು ಸಂಭ್ರಮದಿಂದ ಹರಿಶ್ಚಂದ್ರನನ್ನು ತಡೆದು, ಒಟ್ಟಿಗೆ ನುಡಿಯುವರು.)

ವೀರಬಾಹು

ನಿಲ್ ! ನಿಲ್ಲು ! ದಣಿಯಾಣೆ, ಕೊಲಬೇಡ ; ತಾಳು ತಾಳು.
ಮುಕ್ತ ನೀ, ಋಣಶೀರಿತ್ತೈ ಅರಸೆ, ಬಾಳು ಬಾಳು !

ಊರದೊರೆ (ಕೈ ಮುಗಿಯುತ್ತ)

ಮುಚ್ಚಿಪೋದೆನ್ನ ಮಗನೆಚ್ಚರಕೆ ಬಂದನೈ
ಅಪರಾಧಿ, ಅವಿಚಾರಿ, ಕ್ಷಮೆಯೆರೆದು ನಿಂದೆನೈ.

ವಿಪ್ರ

(ಚಂದ್ರಮತಿಯ ಕಟ್ಟುಗಳನ್ನು ಬಿಚ್ಚಿ ಸಂತೈಸುತ್ತ)

ಮಗಳಿವಳು, ತೊತ್ತಲ್ಲ, ನಮ್ಮೆಲ್ಲರೈಸಿರಿ
ಹರಿಶ್ಚಂದ್ರನ ರಾಣಿ, ಚಾರುಮತಿಯೀಕೆ.

ವಿಶ್ವಾಮಿತ್ರ

(ಹರಿಶ್ಚಂದ್ರನನ್ನು ಆಲಿಂಗಿಸಿ ಆನಂದಾಶ್ರುಗಳನ್ನು ಸುರಿಸುತ್ತಾ)

ಆಹಾ! ಅರಸೇ! ಗೆದ್ದೆಯಲ!
ಆಹಾ ನರಕುಲ ಗೆದ್ದಿತಲ!
ವಸಿಷ್ಠ ಗೆದ್ದನು, ನಾನೂ ಗೆದ್ದೆನು!
ವರ್ಧಿಸಿತೈ ಎನಗಾತ್ಮಬಲ!
ಸೃಷ್ಟಿಯಿದೆಲ್ಲವು ಅಚ್ಚಚ್ಚರಿಗೊಳೆ
ಕೇಡನೆ ಛಲಿಸುತ ಸರಿದೆಯಲ
ಮುನಿಗೂ ಮಿಕ್ಕಿನ ಧೈರ್ಯದೊಳೆಲೆ ದೊರೆ
ಶುಭಾಶುಭಂಗಳ ತೊರೆದೆಯಲ!

(ಚಂದ್ರಮತಿಯನ್ನು ನೋಡಿ)

ನಿಮ್ಮಾಳದೊಳಿಹ ಅಮೃತ ಯಾವುದಕೆ
ನೀರಡಸಿದಿರಾ ಜತೆಗೂಡಿ,
ನಿಮ್ಮ ನಿಜದೊಳೇ ನೀವುಳಿಯುವ ಬೆಲೆ
ಗಿರವಿನದೆಲ್ಲವ ಕೀಳ್ಮಾಡಿ?
ಸಾಮಾನ್ಯರ ತೆರ ಅಳುತಲೆ ನೋಯುತಲೇ
ತಾಳುತಲೇ ನಡೆದೆಯೊ ನೀ
ಉಗ್ರಪಥದಿ ಶಿವದುರ್ಗದತ್ತಲೇ
ಕೈವಿಡಿದಿರೆ ಸಹಚರಿ ತರುಣಿ;

ಅಪ್ರಾಕೃತವೈ ನಿಮ್ಮೆಸಕ,
ಆದರು ಎನಿಪುದು ಪ್ರಾಕೃತಿಕ !
ಆವುದತಿ ಕಠಿಣ ದುರ್‌ಗ್ರಾಹ್ಯವೊ ಅದೆ
ಸರಳವೆನಿಸಿತಾಗದೆ ಕೃತಕ !

ಭಳಿರೇ, ಋಷಿಗೂ ಮಿಗಿಲಾದೆ,
ಎನ್ನ ಮನವನೂ ಋಜುಗೈದೆ !
ಕುದುರಿತೆನ್ನ ವಿಶ್ವಾಸ ನರನೊಳು
ಛಲಮುರಿಯಿತು, ನಾ ಹಸನಾದೆ !

ಗೆದ್ದು ಘೋಷಿಸಿಹೆ ಸತ್ಯಕಾಮ, ನೀ
ನೆಲ್ಲ ಮಾನವರ ಗೆಲವನ್ನೇ ;
ಎಲ್ಲವಳಿದರೂ ಮಾತುಳಿಯಲಿ ಎಂ
ದೇರಿಸುತಾತ್ಮದ ಬೆಲೆಯನ್ನೇ !

ನಿನ್ನೊಳು ಗುರು ಕಂಡುದ—ನಾ ಕಾಣದ
ದಿವ್ಯಛಲವ ನಾನೆಲ್ಲರೊಳೂ
ಕಂಡದ ಕುದರಿಸಲೇರುವೆ ತಪದೊಳು
ಬ್ರಹ್ಮರ್ಷಿಪದಕೆ ಗೆಲವಿನೊಳು

ಏರುವೆನಾವುದಕೂ ಕೆಳಸರಿಯೆನು
ಕಾಂಬೆನು ತಾರಕ ಮಂತ್ರವನು,
ಎಲ್ಲ ಮಾನವಗು ಜಡವ ಬಿಡಿಸಿ ತ-
ನ್ನರಿವನು ತಹ ಶಿವ ತಂತ್ರವನು !

ಗೆಲ್ ಗೆಲ್ ಬಾಳ್ ಬಾಳ್ ರವಿಕುಲದರಸೇ
ಇನ್ನಾಗನು ನರನನೃತವಶ
ಅರಿವರ್ಗಕೆ ಮೌಲ್ಯಾಂಕುಶವಿಡುವನು
ಪುರುಷನಾಗಿ, ವರ್ಧಿಸೆ ಹರುಷ.

ವತ್ಸ ಶಿಷ್ಯ, ಗೆಳೆಯರೆ, ಗಾಳಿಗಳೇ
ಮೌಲ್ಯೋದ್ಧರಣದಿ ನೆರವಿಗರೇ

(ಹಟ್ಟಿಯತ್ತ ಕೈಮಾಡಿ ಕರೆದು ರೋಹಿತಾಶ್ವನನ್ನು ಎಚ್ಚರಿಸಿ)

ಜಯವೆನ್ನಿರಿ ಬೆಲೆತಂದೀ ಆರಸಗೆ
ಸತಿಸುತರೊಡನನುಗಾಲವಿರೆ.

(ಮುಸಣಿಗಸೊಡನೆ ರೋಹಿತಾಶ್ವ ಬಂದು ತಂದೆಯನ್ನಪ್ಪುವನು)

### ನಕ್ಷತ್ರಕ, ವೀರಬಾಹು, ಊರದೊರೆ, ವಿಪ್ರ

ಗೆಲ್ ಗೆಲ್ ಬಾಳ್ ಬಾಳ್ ಮನ್ನಿಸುತೆಮ್ಮನು
ಲೇಸಿನ ದುಡಿತದ ಕೇಡಿಗರ;
ಕೇಡನು ತಳೆವಾ ಬಲ್ಲಿದರಿಂದಲೆ
ಸಲುವುದಿಳೆಗೆ ಸನ್ ಮೌಲ್ಯವರ!

### ವಿಶ್ವಾಮಿತ್ರ

ಕೊಳ್ಳೈ ಮುದ್ರೆಯ ಖಡ್ಗ ಕಿರೀಟವ
ಮುನ್ನೊಲು ರಾಜತ್ವವ ಧರಿಸು.

(ನಕ್ಷತ್ರಕ ಇವೆಲ್ಲವನ್ನೂ ವಿಶ್ವಾಮಿತ್ರನ ಸಂಜ್ಞೆಯಿಂದ ರಾಜನಿಗೆ ಕೊಡುವನು)

### ನಕ್ಷತ್ರಕ

ಮಹರ್ಷಿದತ್ತವಿದೆಂದೀ ನ್ಯಾಸವ
ಬೇರೊಂದೆಣಿಸದೆ ಸ್ವೀಕರಿಸು!

(ಆನಂದಾಶ್ಚರ್ಯಗಳಿಂದ ಮೂಕನಾದ ಹರಿಶ್ಚಂದ್ರ ತಲೆವಾಗಿ ಸ್ವೀಕರಿಸುತ್ತಾನೆ, ಶ್ಮಶಾನದಲ್ಲಿ ದಿವ್ಯಪ್ರಭೆಯೇಳುತ್ತಿದೆ.)

### ವಿಶ್ವಾಮಿತ್ರ

ವತ್ಸ!
ಧರ್ಮದುಹಿತೆಯೀ ಧಾರಿಣಿ; ನೀನೋ
ಧರ್ಮಿಷ್ಠನು, ತಕ್ಕವ ಪೊರೆಯೆ;
ಸಂಯಮಿಗಳೆ ಸೈ ಬೆಲೆಗಳನಿಳೆಯೊಳು
ಸಂಸ್ಥಾಪಿಸಿ ಋದ್ಧಿಯ ಕರೆಯೆ.

## ಉಪಾಸಿಪ್ರಧಾನ ಮತ್ತು ಉಪಾಸಿಗಳು

ಬಾಳು ಬಾಳೈ ಗೆಲ್ಲು ಗೆಲ್ಲು
ಧೀರಸತ್ತ್ವನೆ ಮಂಗಳ
ಶುಭಾಶುಭಗಳನತ್ತ ಸರಿಸುತ
ದಾಟಿದೆಯೊ ದುರ್ಗಂಗಳ.
ವಜ್ರಸಮ ನೀನಾದೆ ಕಣ್ಣಿದಿ-
ರಾಪತ್ತಿನೊತ್ತಡದೊಳೆ.
ಸ್ವಾಭಿಮಾನದ ಹಾನಿ ಸಹಿಸದ
ಮಹಿಮರಿಂದಿಳೆ ಬೆಲೆಯೆಲೆ!
ಅಲ್ಪರೆಮ್ಮೀ ಜಲ್ಪಕಲ್ಪದಿ
ಅಡಗುವುದೆ ಕೇಡಿನ ಪಡೆ?
ಆತ್ಮ ಸಾಧಕರಿಂದಲೇ ಶಿವ-
ಮೌಲ್ಯ ಹಸರಿಪುದೆಲ್ಲೆಡೆ.
ಅಬ್ಬ, ಯಮನನೆ ಶಮದೊಳೆದುರಿಸಿ
ನಿಂತೆಯೋ ಋಷಿಸಮ್ಮತ
ಹುದುಲಿನಿರವೊಳು ಶಿವನ ಗಟ್ಟಿಯ
ನೆಲದಿ, ಕದಲೆನು ಎನ್ನುತ!

### ನಕ್ಷತ್ರಕ

ಹೊರಳಿಸಿದೆ ನೀ ರುದ್ರಮುಖವನು
ಶಿವವೆ ಸಮ್ಮುಖವಾಗಲು,
ಎಲ್ಲರೆದೆಗವಿ ತೆರೆದು ದಿವ್ಯವೆ
ಮೂಡಿಬರೆ ದಯೆಗರೆವೊಲು.

(ದಿಗಂತದಲ್ಲಿ ದಿವ್ಯಪ್ರಭೆ ಮೂಡುತ್ತದೆ; ಆ ಪ್ರಭೆಯತ್ತ ತಿರುಗಿ)

### ಉಪಾಸಿಗಳು

೧

ಅಹಹ,
ಮಸಣದೀ ಭೀಷಣತೆ ಹರಿದಿತು
ಜೀವ ಹದಗೊಂಡೆದ್ದಿತು,

ಇರವೊಳಸಹಜವೆಲ್ಲ ಸಹಜಕೆ
ಮರಳಿ ಹರುಷದಿ ನಿಂದಿತು.

೨

ಎಲ್ಲಿ ಜಯ ನಯ ಋದ್ಧಿ ಸಂಯಮ
ಎಲ್ಲಿ ಮಹಿಮರ ಸಂಗಮ
ಅಲ್ಲಿ ಸನ್ನಿಧಿಸುವನು ಶಂಭು
ಶೋಭಿಸಲು ಜಡ ಜಂಗಮ

ಉಪಾಸಿಪ್ರಧಾನ

(ದಿಗಂತದಲ್ಲಿ ಬಲಿಯುತ್ತಿರುವ ದಿವ್ಯಪ್ರಭಾವಲಯವನ್ನು ನಿರೀಕ್ಷಿಸುತ್ತಾ)

ದಿಟಕು ಆಹಾ ನೋಡಿರತ್ತೆಡೆ
ಬಾನ ಬೆಳಗಿತು ತೇಜವು
ರುಂದ್ರವಾಯಿತು ವಿಯದ್ ರಂಧ್ರ
ನೆರೆದು ದಿವ್ಯ ಸಮಾಜವು
ಓಹೊ ಬಿಡುವೋ ಬಿಡುವು! ಜಪತಪ
ಹವನಕಿಂದೆಡೆ ಎಲ್ಲಿದೋ
ಗರಲಧರನೇ ಹರಸ ಬಹನಿಗೊ
ಸರ್ವಹರಗೆ ಉಧೋ ಉಧೋ!

ವಿಶ್ವಾಮಿತ್ರ

ಆಹ,
ಹರ ಬಂದ ಋಷಿ ಬಂದ ದೇವೇಂದ್ರನೇ ಬಂದ
ಬೃಂದಾರಕರ ವೃಂದದೊಡನೆ ಕೂಡಿ

ನಕ್ಷತ್ರಕ

ಕಳೆಯುಗುವ ಗೆಲುಮೊಗದಿ ಮುಂದಿ ಬಂದಿತು ಜಯವ-
ನುಗ್ಗಡಿಸಿ ಮುಗಿದ ಕೈ ತಲೆಗೆ ಸೂಡಿ

ಉಪಾಸಿಗಳು

ಬಿಂಕವುಳಿದೈದಿಕ್ಕೈ ಬೆಂತರನ ಪಡೆಯಿಗೋ
ಶಿವ ಶಿವ ಶಿವದಿಡುತ ನಲ್ಮೆಯಾಡಿ

ಅಶುಭದುರ್ಗವನೊಡೆದು ಶಂಭುವನೆ ಸೂರೆಗೊಂಡು
ವೀ ಮಾಟಗಾರನದು ಎಂಥ ನೋಡಿ !

ವಸಿಷ್ಠ

(ದೂರದಲ್ಲಿ ಗೋಚರಿಸುವ ಹರ-ಸುರ ವೃಂದದಿಂದ ಪೃಥಕ್ಕರಿಸಿಕೊಂಡು ಮುಂದೆ ಬಂದು ಹರಿಶ್ಚಂದ್ರನ ಸನಿಯದಲ್ಲಿ ಅವತರಿಸಿ, ವಿಶ್ವಾಮಿತ್ರನನ್ನು ಕುರಿತು)

ಅಭಿನಂದನೆ ಅಭಿವಂದನೆ ಮುನಿಪ

(ಹಸ್ತಲಾಘವವಿತ್ತು ಸ್ನೇಹ ಸೂಚಿಸುವನು)

(ಹರಿಶ್ಚಂದನಿಗೆ)

ಅಭಿವಂದನೆ ಶಿವಛಲದರಸೇ

(ಆಲಿಂಗಿಸುವನು. ಚಂದ್ರಮತಿಯನ್ನು ಹರಸುವನು)

ಹರನೊಂದಿಗೆ ದೇವೇಂದ್ರನ ಸಭೆಯೇ
ಅವತರಿಸಿತು ನಿಮ್ಮನು ಹರಸೆ !
ಮನ್ನಿಸು ಮಹರ್ಷಿ,
ಮನ್ನಿಸು ವತ್ಸ
ಮನ್ನಿಸು ಶಿವಮತಿ ಚಂದ್ರಮತಿ
ವಿಶ್ವಾಮಿತ್ರನೆ ಹರನೆ ಮೆಚ್ಚೆ ನ-
ನ್ನೆಣಿಕೆಗೆ ತೂಗಿತು ನಿಮ್ಮ ಧೃತಿ.
ಸ್ಥಾಣುಸ್ಥಲವುಂಟೆಲ್ಲ ಮನುಜರೊಳು
ಸಕಲಾಪದಗಳ ಗೆಲಿದು ನಿಲೆ
ಸಾತ್ವಿಕಛಲದಿಂದದನಡರಿಹೆ ನೀ
ದಿವ್ಯರ ಸನಿಹವೆ ನಿನ್ನ ನೆರೆ

(ವಿಶ್ವಾಮಿತ್ರನಿಗೆ)

ಮನಕೆ ತಾರದಿರು ಅಂದೆಂದುದ, ಸಖ !
ಸತ್ಫಲವಿತ್ತಿತು ನಮ್ಮ ಛಲ
ಇನಕುಲದರಸರಿನಿಳೆಯ ಬೆಲೆಗೊಳಿಸೆ
ಸರಸದ ಹೋರಟೆಯೆಮ್ಮದಲ

### ವಿಶ್ವಾಮಿತ್ರ

(ಹಸನ್ಮುಖದಿಂದ)

ಮನ್ನಿಸಲೇನಿದೆ ? ಉಪಕೃತನಾದೆನು
ಬ್ರಹ್ಮರ್ಷಿ, ನಾನೆನ್ನರಿತು
ನಾನೆಯರಿಯದೆನ್ನಾತ್ಮದೋಷವನು
ಅರಿಯಿಪರಾರೈ ನೀ ಹೊರತು ?

ಮರುಕದ ನೆವದೊಳಗಹಂತೆ ಮೆರೆಯಿತು
ನಾ ನ್ಯೈಷ್ಠುರ್ಯದೊಳದ ತೊಳೆದೆ
ಅಂತರ ರಸವೀ ಛಲದಿಂ ಹಿಂಗದ
ತೆರನದನಿವನಿಂ ನೀ ಕಳೆದೆ ;

ನಿನ್ನ ಪಂಕ್ತಿಯೆನಗಾಗಲು, ಮಹಿಮ,
ಮೈತ್ರಿಯೊಳೀ ನೀನಿದ ಗೈದೆ
ನನ್ನೆಲ್ಲ ತಪವನರಸಗಿತ್ತು, ನಾ
ಮರಳಿ ತಪಕೆ ನಿಲೆ ಲೇಸಾದೆ.

(ಹರಿಶ್ಚಂದ್ರನಿಗೆ)

ಕೋ ಕೋ ವತ್ಸ, ಧಾರೆಯೆರೆವೆ ಕೋ
ತೇಜವೋಜೆ ವಿಭ್ರಾಜಿತೆಯ !

### ವಸಿಷ್ಠ

ಹರನೆಯೊಸೆದಿತ್ತ ರಾಜರ್ಷಿತೆಯನು
ಕೋ ನಾನೀವೀ ಹೃಷ್ಟತೆಯ

(ವಾತ್ಸಲ್ಯದಿಂದ ಎಲ್ಲರೂ ಸುತ್ತುಗಟ್ಟಿ, ಮುಟ್ಟಿ ಹರಸುತ್ತಾರೆ. ಹರಿಶ್ಚಂದ್ರ-
ಂದ್ರಮತಿ ರೋಹಿತಾಶ್ವರಿಗೆ ದಿವ್ಯಸ್ವರೂಪ ಬರುತ್ತದೆ. ತನಗಾದ ಪರಿವರ್ತನಕ್ಕೆ
ರಗಾಗಿ ಹರಿಶ್ಚಂದ್ರ ನಿಶ್ಚಯನಾಗಿ ನೋಡಲುತ್ತಾನೆ).

### ಹರಿಶ್ಚಂದ್ರ

ಕನಸು ! ಕನಸು ! ಕಣಸು !
ಮಾತಿಲಿಯಾಯಿತು ಮನಸು

ಸುಳ್ಳೆನ್ನದು ನಿಜವೆನ್ನದು
ಹರುಷಕೆ ಬಾಗಿಲ ತೆರೆದು.

ಬೆಳಕು ಬೆಳಕೆ ಎತ್ತಲು
ಬತ್ತಲಾಯ್ತು ಕತ್ತಲು
ಹೊಳವಿನ ನಗೆಮೊಗವೆಲ್ಲೆಡೆ
ಹರಕೆಸ್ಸೆಯ ರುದ್ರಪಡೆ !
ತಾಂಡವನಟ ಶಂಕರನೆನೆ
ತಾನಾದನು ಪ್ರಕಟ.

ನನ್ನಿ ವ್ಯಾಘ್ರ ತನ್ನ ಮರಿಯ
ನಿರಿಸಿತೊಯ್ದು ನೆಮ್ಮದಿಗೆ
ದಿವ್ಯಋಷಿಗಳೆನ್ನ ಸೂರೆ
ಗೊಟ್ಟರು ಮಂಗಳನಿಧಿಗೆ
ವಿಷಮವೆಲ್ಲ ಹಿತಕೆ ತಿರುಗಿ-
ತಿಂದು ನೆನೆದು ನಗುವೊಲು
ಮುದ್ದಿಡುತಿಹ ಲೋಕಕಾದೆ
ಮುಗ್ಧ ನಾನು ಮಗುವೊಲು.

ಬಾ ಮಗು, ಬಾ ಚಂದ್ರಮತಿ,
ಬಾ ಬಾ ಮರುಕದ ಮಸಣಿಗ
ದೂರನಿಂತೆಯೇಕೆ ?
ಇನ್ನಿಲ್ಲವು ನಿನಗೆ ನನ್ನ
ಬಿರುಮಾತಿನ ಜೋಕೆ.

ಗೆಳೆಯರೆ, ಮಹಿಮರೆ, ಮುನಿಗಳೆ
ಮಸಣನೆಲೆಯ ಬೆಂತರಗಳೆ
ಕೈಜೋಡಿಪುದೊಂದಲ್ಲದೆ
ಅರಿಯೆನು ಬೇರೆಯು ಸತ್‌ಕ್ರಿಯೆ
ವರಿಸಿತೆನ್ನ ನಿಷ್ಕ್ರಿಯೆ—

(ಸುಮ್ಮನೆ ಎಲ್ಲರಿಗೂ ಕೈಮುಗಿಯುತ್ತಾ ನಿಲ್ಲುವನು. ದಿವ್ಯ ದೇವತಾವೃಂದ ಆತನನ್ನು ಸುತ್ತುವರಿಯುತ್ತದೆ.)

## ಉಪಾಸಿಪ್ರಧಾನ

ಆಹಾ,
ನುಶಿಯಿಡುವರೆಲ್ಲರೂ ಮಸಣ ಮಂಗಳವಾಯ್ತು
　ಶಿವತೇಜದಿಂದೆಲ್ಲ ಉಜ್ಜ್ವಲಿಸಿದೆ
ಗುಡಿಸಲರಮನೆಯಾಯ್ತು, ದೇವಋಷಿಗಣವೆಲ್ಲ
　ನನ್ನಿಗನನೋಲೈಸೆ ನೆರೆಯುತ್ತಿದೆ
ಒಳಹೊರಗ ಹೊಂದಿಸಿದ ಧೀರನಿವನಾನಂದ
　ತನಗಾದ ತೆರನಾಯ್ತು ಲೋಕಕೆಲ್ಲ
ಅಪರೋಕ್ಷ ಪ್ರತ್ಯಕ್ಷವಾದೊಲಂತರತಮನ
　ಹೊರಗೆ ತೋರಿಹನಹಹ ನನ್ನಿನಲ್ಲ !

ನೋನೋಡುತಿರುವಂದೆ ಮೇಲಕೇರಿತು ತಿರೆ
　ವಚನಪಾಲನ ಮೌಲ್ಯ ಭೂಷೆಯುಜ್ಜ್ವಲಿಸೆ
ಆ ಹೊಗರ ಬಳಿವಿಡಿದು ಸಿರಿಯೆ ಹೊಕ್ಕಳು ನರರ,
　ಪ್ರಕೃತಿಕಾರ್ಪಣ್ಯದಿಂದವರನುತ್ತರಿಸೆ.
ಕಿವಿತೆರೆದು ಶಿವರವಕೆ ಕಣ್ತೆರೆದು ಶಿವರೂಪ-
　ಕಿರವು ಹಿಗ್ಗಿನೊಳಿಹುದು ವರ ಸಂದ ತೆರದಿ,
ಬಲು ಸುಮಾನದಿ ಜೀವ ಸಾಮಾನ್ಯನೀ ಗೆಲವ
　　ಕೊಂಡಾಡುತಿದೆ ಶಿವಗೆ ಮೊರೆಗೊಡುವ ನೆವದಿ

### ದೇವ ದೇವತಾವೃಂದ (ಮತ್ತು ಉಪಾಸಿವೃಂದ)

ಹರ ಹರ ಹರ ಹರ ಶಂಭೋ ಶಂಕರ ಗರಧರ ಸರ್ವಹರ
ಪುರಹರ ಸ್ಮರಹರ ಸರ್ವಭಯಂಕರ ಅಘಹರ ದುಃಖಹರ
ನಕ್ಷತ್ರ ಸುಮಚಿತ ವ್ಯೋಮಜಟಾಧರ ಶಶಿಧರ ಸುಂದರ ಸ್ವಾಂತಹರ
ಲಲಿತಾಲಾವಣ್ಯ ಸಿಂಚಿತ ತನುಧರ ಗಂಗಾದಯಾಸಿಕ್ತ ಚರಾಚರ

### ಹರಿಶ್ಚಂದ್ರ ಮತ್ತು ವೃಂದ

ಫಾಲಾಗ್ನಿರುದ್ರೋಗ್ರ ಗರಳೋಗ್ರ ಸರ್ಪೋಗ್ರ ಭಸ್ಮೋಗ್ರ ಬಹಿರುಗ್ರ
　　　　　　　　　　　　　　　　　　ಅಂತಶ್ಶಿವ
ವಿಷಯವಿಷಮ ಭೀಮ ಕಾಮಕರಾಳನೆ ಸಾಧುವಿಶದ ಸ್ವಾಮಿ ಮಹಾದೇವ

ವಿಶ್ವಾಮಿತ್ರ ಮತ್ತು ವೃಂದ

ಭೂತಸಕ್ತೋದ್ಧೃತ ಕರ್ಮವ್ಯೂಹಾವೃತ ದುರ್ಗಮಾಂತಃಪಥ ಧೀರಜಿತ
ಸತ್ಯಸಾನ್ನಿಧ್ಯನೆ ವ್ರತವೃತ ನಿರ್ವೃತ ನಿರ್ವೃತಿದಾತನೆ ಸರ್ವನುತ

ವಸಿಷ್ಠ ಮತ್ತು ವೃಂದ

ನಿತ್ಯನೆ ಸತ್ಯನೆ ಸತ್ಯಪ್ರಿಯ ಸತ್ಯನಿಷ್ಠುರ ನಿಷ್ಠುರ ಪೊರೆವ ದಯಾಳೋ
ಧರ್ಮಕರಾಲಂಬ ಸರ್ವಚೇತನಕಿತ್ತು ಹಿಡಿವರಿಗಭಯವ ಕೊಡುವ
ಕೃಪಾಳೋ

ನಾರದ ಮತ್ತು ವೃಂದ

ಅಶುಭದಿ ಶುಭ ತೋರೆ ಶುಭದೊಳಗಶುಭವೆ ಭ್ರಮೆಯ ಚೆಂಡಾಡುವ
ಚೆನ್ನಾಟಗಾರ
ನೀನೀವ ಸನ್ನಿಯ ನೂಲ ಹಿಡಿಯದ ಜೀವ ಭೂತ ಚಕ್ರಕೆ ಸಲುವ
ಬಲುಬಿನದಗಾರ !

ಭೂತಗಣ

ಸತ್ಯವೆ ಶಿವನೆಂಬ ಧೀರನೊಬ್ಬನಿಗೊಲಿಯೆ ಜಗವೆಮ್ಮ ತೂರುವ ತೆರ ಶಿವವ
ಸೂರೆಗೊಡುತಿಹ ಪೂರ್ಣ ಶಿವತವನಿಧಿ ನಿನ್ನ ಲೀಲೆಯ ಕಾಣೆವೊ
ಮರುಳಗರುವ !

(ದೃಶ್ಯ ಮರೆಯಾಗುತ್ತದೆ.)

ಉಪಾಸಿಗಳು

೧

ಸುರಸಿದ್ಧ ಕಿನ್ನರ ಗಂಧರ್ವಾಪ್ಸರೆಯರು ಮುನಿಋಷಿಗಣ ಗಣ ಭ್ರಮಿಸುತ್ತಿವೆ
ಬಿಸಿಲು ಕೋಲಿನ ತುಂಬ ಧೂಳೀಕಣದಂತೆ ಶಿವನ ತೇಜದಿ ತುಂಬಿ
ರಮಿಸುತ್ತಿವೆ !

೨

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಹಣೆಗಣ್ಣಿನುರಿಗೊಂಡು
ಬೆಳಗುತ್ತಿವೆ !
ಭವದನುಭವವೆಲ್ಲ ಶಿವದನುಭವವಾಗೆ ಮನಮನ ಕಣಸೊಳು ತೊಳಗುತ್ತಿವೆ !

೧

ಸತಿಯುಳಿದ ನಲವರಿಯ ಸುತನುಳಿದ ನಲವರಿಯ ಸಿರಿ ಮರಳಿ ನಾಡೆರೆಯ
ನಾದ ಪರಿಯ
ಉಳಿವಳಿವರಿಯರಿದೆ ನಲವೊಂದನರಿಯುತ ಶಿವದೊಳಗೊಂದಾದ
ನನ್ನಿಯೊಡೆಯ!

೨

ಅಳಿದನೊ ಉಳಿದನೊ ನೊಂದನೊ ನಲಿದನೊ ಸುಡುವಕಾಡೋ ಇದು ಶಿವನ
ನಾಡೋ
ಬಾನುದ್ದ ತಿರೆಯೇಳಿ ಜೀವ ಜೀವವ ಮಿಡಿದು ದಿವಸತ್ತ್ವಗಳೊರೆವ
ಮೇಳವಾಡೋ

೧

ಬೆಳಕೊಂದು ಬೆಳಗಿತು ಧರೆಯತ್ತಲಿಳಿಯಿತು ಶಿವತೇಜದೊಂದೆಸಳು
ಜಗುಳಿದಂತೆ
ಮಂದಿಯ ಹೊಕ್ಕಿತು ಕಳೆಯಾಗಿ ನಿಂತಿತು ಹೊಸಬೆಲೆ ಜೀವಕೆ ಒದಗಿದಂತೆ!

೨

ಕೊಟ್ಟಮಾತುಳಿವಂತೆ ನಡೆವುದೆ ಚೆನ್ನೆಂಬ ರೂಢಿಗೆ ಸಂದಿತು ಮನುಜ ಲೋಕ
ತಪವೆಮ್ಮದೀಯದ ಶುಭವನೆ ಇತ್ತಿತು ಈ ದಂಪತಿಗಳ ದುಃಖಪಾಕ.

೧

ಬಸಿದನು ವಿಶ್ವಾಮಿತ್ರನನಾತ್ರೇಯ, ಬಸಿದನು ಗಾಧೇಯನೀ ದೊರೆಯ !
ಬಸಿದರು ದೊರೆ ಬೆಂತರಗಳು ನಮ್ಮನು, ಅರಿಯೆ ಶುಭಾಶುಭಗಳ ಪರಿಯ.
ಇಂತು ನಮ್ಮೆಲ್ಲರ ಶೋಧಿಸಿ ಶಿವಸತ್ತ್ವ ತನ್ನೊಂದು ಕಳೆಯನು ದೊರೆಸೆವದಿ;
ಹಿರಿಜೀವ ಬೆಲೆಯೊಂದಕಿರವನೆ ಪಣವಿಟ್ಟುದುದನೆನೆವೊಲು ಚಿರಜನಮನದಿ.

ಎಲ್ಲರೂ

ಹುಟ್ಟಳಿವು ಸೊಗದುಕ್ಕಗಳ ತೆರೆಗಲುಗದೆ ಲೇಸಾವುದೊ ನಮ್ಮ ತಲದೊಳಿದೆ
ದಾನ ತಪ ಸತ್ಯ ಶೌಚಗಳೆಲ್ಲಕು ಪ್ರೇರಣೆಯತ್ತಣಿನೇಳುತಿದೆ
ತಮ್ಮಾಳಕಿಳಿಯುತ್ತಲದ ಮುಟ್ಟನಿಂತವರಿಂದಲೆ ಲೇಸಿನ ಬೆಲೆ ತಿರೆಗೆ.
ಧೀರನೊಬ್ಬನ ಗೆಲವೆಲ್ಲರ ಗೆಲವದು ಅವನೊಳೆ ಶಿವನಿಗೆ ಬಲು ಸಲುಗೆ.

## ಭರತವಾಕ್ಯ

ಅಶುಭಶುಭಂಗಳ ಗಣಿಸದೆ ಸಾಗಲಿ  ಶಿವಹೃದಯರ ಪಾಡು ಧರಣಿಯೊಳು
ನೆಲೆಬೆಲೆಗಳ ಹೊಂದಿ ಜರುಗಲಿ ನರನಿಗೆ ಕಾಮಾದಿ ಪುರುಷಾರ್ಥದೊಸಗೆಗಳು
ಮತ್ತೊಂದು ಪ್ರಕೃತಿಯತೆರದೊಳುಮನುಜನಿಗೆ ವಿಜ್ಞಾನವಿಪಿನವರಚಿಸುತಿರೆ
ಮೃಗವಾಗಡೆ ಅಲ್ಲಿ ನರನಾಗುಳಿವಂದ ಸಂತತವವಗಾಗೆ ಶಿವನೆ ಮರೆ.

---

## ಗ್ರಂಥಗಳು

### ಗೌರವ ಗ್ರಂಥ

...ಗಳಾದ ಡಾ. ಗೊರೂರು ರಾಮಸ್ವಾಮಿ ...ಎಪ್ಪತ್ತನೆಯ ವರುಷದ ಸಂದರ್ಭದಲ್ಲಿ ಅಭಿ...ನ ಸುಪ್ರಸಿದ್ಧ ಸಾಹಿತಿಗಳೂ ರಾಜಕಾರಣಿಗಳೂ ಅರ್ಪಿಸಿದ ... ಸಂಪುಟ. ಇದರಲ್ಲಿ ೫೫ ಲೇಖನಗಳಿವೆ. ಪ್ರತಿಯೊಬ್ಬರ ಭಂಡಾರದಲ್ಲಿ ಇಡಲು ಯೋಗ್ಯವಾದ ಗ್ರಂಥ. ಪುಟಗಳು : ೫೪೦

...ಲೆ : ಸಾಧಾರಣ ಪ್ರತಿ ೨೫-೦೦ ಕ್ಯಾಲಿಕೊಪ್ರತಿ ೩೫-೦೦

### ೨. ಬೆಳ್ಳಿಶಾರದೆ

ಮೈಸೂರಿನ ಸುಪ್ರಸಿದ್ಧ ಕಾವ್ಯಮಾಲೆಯಾದ 'ಕನ್ನಡ ಕವಿಕಾವ್ಯ ಮಾಲೆ'ಯ ರಜತೋತ್ಸವ ಗ್ರಂಥ. ಇದರಲ್ಲಿ ಕಥೆ, ಕವನ, ಪ್ರಬಂಧ, ನಾಟಕ ಹಾಗೂ ವಿದ್ವತ್ ಲೇಖನಗಳಿವೆ. ಎಲ್ಲ ಕ್ಯಾಲಿಕೊ ಪ್ರತಿಗಳು.

ಬೆಲೆ : ೩೦-೦೦

ಪುಟಗಳು : ೪೬೩

### ೩. ಸ್ನೇಹಾಂಜಲಿ

ಮೈಸೂರಿನ ಸುಪ್ರಸಿದ್ಧ ವಿದ್ಯಾಸಂಸ್ಥೆಯಾದ ಶಾರದಾವಿಲಾಸ ಕಾಲೇಜಿನ ಕನ್ನಡ ಪ್ರಾಧ್ಯಾಪಕರೂ ಹಾಗೂ ಕಾಲೇಜಿನ ಪ್ರಿನ್ಸಿಪಾಲರೂ ಆದ ಪ್ರೊ. ಎಚ್. ಎಂ ಶಂಕರನಾರಾಯಣರಾಯರಿಗೆ ಅವರ ಅರವತ್ತನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ ಇಷ್ಟರೂ ಮಿತ್ರರೂ ಅರ್ಪಿಸಿದ ಮೆಚ್ಚುಗೆಯ ಗ್ರಂಥ.

ಬೆಲೆ : ೨೦-೦೦

ಪುಟಗಳು : ೧೮೮

ನಮ್ಮಲ್ಲಿ ಸುಪ್ರಸಿದ್ಧ ಸಾಹಿತಿಗಳ ಕನ್ನಡಗ್ರಂಥಗಳು ದೊರೆಯುತ್ತವೆ. ವಿವರಗಳಿಗೆ ಬರೆಯಿರಿ

---

ಶಾರದಾಮಂದಿರ, ರಾಮಯ್ಯರ್‌ರಸ್ತೆ, ಮೈಸೂರು-೪
ರೂ [illegible] 3-25